


ದಶವರ್ಷ ಸಂಭ್ರಮದ ಪುಸ್ತಕ ಮಾಲಿಕೆ 2021

# ಅಟ್ಟಿ

(ವಿಚಾರಗಳ ಅರೆಬಾಸೆ ಅಟ್ಟಿ)

ಪ್ರಬಂಧ ಸಂಕಲನ

। ಕೊಟ್ಟಕೇರಿಯನ ಲೀಲಾ ದಯಾನಂದ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ

Decennial Year Publication Series 2021

"ಅಟ್ಟಿ" ಅರೆಭಾಷೆ ಪ್ರಬಂಧ ಸಂಕಲನ

**ATTI- Arebhashe Essays**

Written by: **Kottakeriyana Leela Dayananda**, SDE, BSNL
'Shreepooja', Gowli Street, Madikeri-571201, Kodagu District
Mob: 9449858586/ Email: leelacoorg@gmail.com

**ಸಲಹಾ ಸಮಿತಿ:**

ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ:

**ರಿಜಿಸ್ಟ್ರಾರ್**

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ:

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಕಾಫಿಕೃಪಾ ಬಿಲ್ಡಿಂಗ್, ರಾಜಾಸೀಟ್ ರಸ್ತೆ, ಮಡಿಕೇರಿ
ದೂ: 08272-223055, ಮೊ: 6362522677
arebaseacademy@gmail.com, https://arebhasheacademy.karnataka.gov.in

**ಪ್ರಕಟಣೆಯ ವರ್ಷ: 2022**



ಪುಟಗಳು: 90 ಬೆಲೆ: ರೂ. 80

ಪ್ರತಿಗಳು: 300 ಆಕಾರ: ಡೆಮಿ 1/8 ಕಾಗದ: 80 ಜಿಎಸ್ಎಂ ಮ್ಯಾಪ್ಲಿತೋ

ಮುಖ ಪುಟ ವಿನ್ಯಾಸ: **ದಿನೇಶ್ ಹೊಳ್ಳ**

ಪುಟ ವಿನ್ಯಾಸ: **ನಾಗರಾಜ ವೈದ್ಯ, ಮೀಡಿಯಾಚೆರೀ ಡಿಸೈನ್ ಡೆಸ್ಕ್**

ಮುದ್ರಣ:

ರಾಷ್ಟ್ರೋತ್ಥಾನ ಮುದ್ರಣಾಲಯ,
ಚಾಮರಾಜಪೇಟೆ, ಬೆಂಗಳೂರು

# ಅಧ್ಯಕ್ಷರ ಮಾತ್

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ವತಿಯಿಂದ ಹಮ್ಮಿಕಂಡ ಪುಸ್ತಕ ಪ್ರಕಟಣಾ ಯೋಜನೆ ಅಡಿಲಿ ಶ್ರೀಮತಿ ಕೊಟ್ಟಕೇರಿಯನ ಲೀಲಾ ದಯಾನಂದರವರ ವಿಚಾರ ಲೇಖನಗಳ ಸಂಕಲನ 'ಅಟ್ಟಿ' ಹೊರ ಬರ್‌ತಿರ್‌ದು ನಿಜಕ್ಕೂ ಕುಸಿಯ ಸಂಗತಿ. ತಮ್ಮ ಅನುಭವದ ವಿಸಯನ, ವಿಚಾರಪೂರ್ಣ ಸಂಗತಿಗಳನ್ನ, ಮೇರು ಸಾಧಕರ ಪರಿಚಯನ ಈ ಕೃತಿಲಿ ಕಟ್ಟಿ ಕೊಟ್ಟೊಳೊ. ಅರೆಬಾಸಿಗರ ಜೀವನ ವಿಧಾನ, ಅವರ ಆರೋಗ್ಯ ಸಂಗತಿಯ ಒಳಗುಟ್ಟು, ಕೊಡಗಿನ ಸ್ಥಳ ಪುರಾಣ, ಮಹಾತ್ಮರ, ಸಾಧಕರ ಕುರಿತ ಒಳನೋಟ ಎಲ್ಲನೂ ಇಲ್ಲಿ ನಮ್ಮ ಬಾಸೆಲಿ ಕ್ರೋಡೀಕರಿಸಿ ಬರ್ದೊಳೊ. ಈಗಷ್ಟೇ ಬರಿಯಕೆ ಶುರು ಮಾಡಿರೂ ಸುರುನ ಪುಸ್ತಕಲೇ ಇನ್ನಷ್ಟ್ ಬರೆಯುವ ಜಾಣ್ಮೆನ ತೋರಿಸಿ ಕೊಟ್ಟೊಳೊ. ಇಲ್ಲಿರುವ ಎಲ್ಲ ವಿಚಾರಗ ನಾವುಗೆ ನಮ್ಮದೇ ಬಾಸೆಲಿ ಓದ್ಕನ ಒಂದು ರೀತಿಯ ಕುಸಿ ಆದೆ. ಇದ್ ನಮ್ಮ ಬಾಸೆಗಿರುವ ಸಕ್ತಿ. ನಮ್ಮ ಬಾಸೆ ಉಳಿಯೊಕು, ಬೆಳಿಯೊಕೂತಾದರೆ ಲಿಖಿತ ರೂಪಲಿ ಬರಹ ದಾಖಲಾಗುವ ಅಗತ್ಯ ಉಟ್ಟು. ಇಂತಹ ಅಗತ್ಯನ ಮನಗಂಡ್ ಅರೆಬಾಸೆಲಿ ಬರೆಯುವ ಪ್ರಯತ್ನಕ್ಕೆ ಕೈ ಹಾಕಿ ಲೇಖಕಿ ಲೀಲಾ ದಯಾನಂದ ಅವು ಯಶಸ್ಸ್ ಗಳ್‌ಸಿಯೊಳೊ. ಅವು ಮತ್ತಷ್ಟ್ ಕೃತಿಗಳನ್ನ ಅರೆಬಾಸೆಗೆ ಕೊಡೊಕೂತೇಳಿ ಈ ಹೊತ್ತುಲಿ ಅವರ ಅರೆಬಾಸೆ 'ಅಟ್ಟಿ' ಗೆ ಅಭಿನಂದನೆ ಸಲ್ಲಿಸುತ್ತೊಳೆ.

**। ಲಕ್ಷ್ಮೀನಾರಾಯಣ ಕಜೆಗದ್ದೆ.**

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ನಂದೆರಡ್ ಮಾತ್

## (ಅಟ್ಟಿ ಇಸಿಕೆ ಮುಂದೆ)

ಕನ್ನಡ ಬಾಸೆಲಿ ಪದ್ಯ – ಲೇಖನಗಾತ ಬರ್‌ಕಂಡಿದ್ದ ನಂಗೆ 2010 ನೇ ಇಸ್‌ವಿಲಿ ಹೆಸರ್‌ವಾಸಿ ಪತ್ರಕರ್ತ, ಆತ್ಮೀಯ ಶ್ರೀ ಅನಿಲ್ ಹೆಚ್.ಟಿ. ಅವ್ "ಈ ಸತಿ ದಸರಾ ಕವಿಗೋಷ್ಠಿಗೆ ನಿಮ್ಮ ಅರೆಬಾಸೆಲಿ ಪದ್ಯ ಬರೆಯನಿ" ತ ಹೇಳ್ದ ಕಿವಿಮಾತ್ ನನ್ನ ಅರೆಬಾಸೆ ಒಕ್ಕಣೆಗೆ ನಾಂದಿ ಹಾಡ್‌ದರ ನಾ ಮರೆಯಕಿಲೆ. 'ಕೊಡಗು ಚಾನೆಲ್' ತೇಳ್ವ ಟಿ.ವಿ. ಮಾಧ್ಯಮಲಿ "ಗೌಡ ಬಂಧುಗ' ತೇಳ್ವ ಅರೆಬಾಸೆ ಕಾರ್ಯಕ್ರಮದ ನಿರೂಪಕಿಯಾಕೆ ನಂಗೆ ಅವರಿಂದಾಗಿ ಅವಕಾಸ ಸಿಕ್ಕಿತ್ತ್. ಹಂಗೆನೇ ಅವ್ ಮಡಿಕೇರಿ ದಸರಾ ಸಾಂಸ್ಕೃತಿಕ ಸಮಿತಿಲಿ ಅಧ್ಯಕ್ಷರಾಗಿರ್‌ಕನ 2011 ನೇ ಇಸ್‌ವಿಂದ ಮೂರ್ ವರ್ಸ ಮುಟ್ಟ ಸಾಂಸ್ಕೃತಿಕ ಸಮಿತಿನ ಸದಸ್ಯೆಯಾಗ್‌ವ ಕುಸಿನ ಸನ ನಂಗೆ ಕೊಟ್ಟದಷ್ಟೇ ಅಲ್ಲ, ನನ್ನ ಬರವಣಿಗೆಗೆ ಕೊಟ್ಟ ಹುರ್ಪುಗೆ ನಾನವ್‌ಕೆ ಚಿರಋಣಿ.

ಸಣ್ಣದಿರ್‌ಕನೇ ಅರೆಬಾಸೆ ನನ್ನ ಕೆಮಿ ಮೇಲೆ ಬೀಳ್‌ವಂಗೆ ಮಾಡಿ ಬಾಸೆ ಮೇಲೆ ಅಭಿಮಾನ ಹುಟ್‌ಸಿದ ನನ್ನಪ್ಪ ಶ್ರೀ ಬೈಮನ ಆರ್ ಮಾಚಯ್ಯ, ಅಮ್ಮ ಶ್ರೀಮತಿ ಬೈಮನ ಪೂವಮ್ಮನವರ ಪ್ರೀತಿ– ಆಸೀರ್ವಾದದ ತೀರ್‌ಸಿಕಾಗದ ಋಣನ ಕೈ ಮುಗ್‌ದ್ ನೆನ್‌ಸಿಕಂಡ್ ನನ್ನ ಸುರೂನ ಈ ಪುಸ್ತಕನ ಅವ್‌ಕೆ ಅರ್ಪಿಸಿನೆ.

ನನ್ನ ಅರೆಬಾಸೆ ಪದ್ಯಗಳ್‌ನ ಪುಸ್ತಕ ರೂಪಲಿ ನಿಮ್ಮ ಮುಂದೆ ಇಸೊಕೂತ ಗ್ಯಾನ ಮಾಡಿಕಂಡಿದ್ದೆ. ಅದ್‌ಕೆ ಮುಂದೆ ವಿಚಾರ ಲೇಖನಗಳ್ನ ಅಟ್ಟಿ ಇಸಿದ ನನ್ನ ಪ್ರಬಂಧ ಸಂಕಲನ "ಅಟ್ಟಿ" ತಯಾರಾತ್. ಇದ್‌ನ ಪ್ರಕಟಣೆಗೆ ಆಯ್ಕೆ ಮಾಡಿ, ಪುಸ್ತಕ ಮಾಡ್‌ದಂತ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಮತ್ತೆ ಅವರ ತಂಡದವ್‌ಕೆ ನನ್ನ ತುಂಬು ಧನ್ಯವಾದಗ.

ಯಾವ್‌ದೇ ಅರೆಬಾಸೆ ಸಬ್ದದ ಸರಿಯಾದ ಬಳಕೆನ ಬಗ್ಗೆ ನಂಗೆ ಈಗೊಳೂ ಬೇಜಾರಿಲ್ಲದೆ ತಿಳ್‌ವಳಿಕೆ ನೀಡ್‌ತಿರ್‌ವಂತ 98 ರ ಹೊಸ್ತಿಲ್ ದಾಟಿರ್‌ವಂತ ನನ್ನ ದೊಡ್ಡಪ್ಪ, ಬೈಮನ ಕುಟುಂಬದ ಪಟ್ಟೇದಾರ ಬೈಮನ ಶ್ರೀ ಆರ್. ಪೊನ್ನಪ್ಪನವರ ಜೀವನ ಪ್ರೀತಿಗೆ ನನ್ನ ಸಾಷ್ಟಾಂಗ ನಮಸ್ಕಾರಗ.

ಕೊಡ್‌ಗ್‌ಲಷ್ಟೇ ಅಲ್ಲದೆ ಸುಳ್ಯ, ಮೈಸೂರು, ಬೆಂಗಳೂರು ಸೇರ್ದಂಗೆ ರಾಜ್ಯದ ಬೇರೆ ಬೇರೆ ಜಾಗೆಗಳ್‌ಲಿ ಅರೆಬಾಸೆ ಪದ್ಯಗಳ್‌ನ ಓದಿಕೆ ವೇದಿಕೆಗಳ್‌ನ ಒದ್‌ಗ್‌ಸಿ ಕೊಟ್ಟ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಂದ್‌ನ (ನಿಕಟ ಪೂರ್ವ) ಅಧ್ಯಕ್ಷರಾಗಿದ್ದ ಕೊಲ್ಯದ ಶ್ರೀ ಗಿರೀಶ್ ಮತ್ತೆ ತಂಡನ ಕೃತಜ್ಞತೆಲಿ ನೆನ್‌ಸಿಕಣೆ.

ಹೊತಾರೆ ಮಡಿಕೇರಿಂದ ಪ್ರಸಾರ ಆಗ್‌ತಿರ್‌ವಂತ "ಉದಯರಾಗ" ಕಾರ್ಯಕ್ರಮಲಿ ನನ್ನ ಅರೆಬಾಸೆ ಭಕ್ತಿಗೀತೆನ ಪ್ರಸಾರಕೆ, "ಅರೆಬಾಸೆ ಐಸಿರಿ' ಲಿ ಕಾರ್ಯಕ್ರಮಗಳ್‌ಗೆ ಅವಕಾಸ ನೀಡ್‌ತಿರ್‌ವಂತ ಮಡಿಕೇರಿ 'ಆಕಾಶವಾಣಿ" ಗೆ ಮತ್ತೆ "ಹಿಂಗಾರ" ತ್ರೈಮಾಸಿಕಲಿ ನನ್ನ ಅರೆಬಾಸೆ ಬರಹಗಳ್‌ಗೆ ಅವಕಾಸ ಒದ್‌ಗ್‌ಸಿದ ಪ್ರತಿಯೊಬ್ಬಂಗೂ ಧನ್ಯವಾದಗ.

"ಅರೆಬಾಸೆಲಿ ಇನ್ನೂ ಹೆಚ್ಚ್ ಬರೆಯನಿ" ತ ಬೆನ್ನ್ ತಟ್ಟಿ, ನನ್ನ ಸುರೂನ ಪ್ರಬಂಧ ಸಂಕಲನಕೆ ಮುನ್ನುಡಿ ಬರ್‌ದ್, ದೊಡ್ಡಣ್ಣನಂಗೆ ಶುಭ ಹಾರೈಸಿದ ಖ್ಯಾತ ಅರೆಬಾಸೆ ಸಾಹಿತಿಗಳಾಗಿರ್‌ವ ಬಾರಿಯಂಡ ಶ್ರೀ ಜೋಯಪ್ಪನವ್‌ಕೆ ನನ್ನ ಗೌರವಪೂರ್ವಕ ಕೃತಜ್ಞತೆಗ.

ಅಟ್ಟ

"ಬರ್‌ದದನೆಲ್ಲಾ ಜೋಡ್‌ಸಿಟ್ಟ್ ಅರೆಬಾಸೆಲಿ ನಿಂಗೊಂದ್ ಪುಸ್ತಕ ಮಾಡಿಕೇನ್" ತ ಹುರ್ಪು ತುಂಬಿದ ತಂಗೆಕಳಂಗಿರ್‌ವ ಬರಹಗಾರ್ತಿಗ ಸ್ಮಿತಾ ಅಮೃತ್‌ರಾಜ್, ಸಂಗೀತಾ ರವಿರಾಜ್ ಇವರ್‌ನ ನಾ ಪ್ರೀತಿಲಿ ಗ್ಯಾನ ಮಾಡಿಕಣೆ,

ನನ್ನ ಈ ಪ್ರಬಂಧ ಸಂಕಲನಕೆ ಬಹಳಷ್ಟ್ ಮಾಹಿತಿಗಳ್‌ನ ಮನೆಲಿಸಿಕಂಡ ಗ್ರಂಥ ಭಂಡಾರಂದ ಹುಡ್‌ಕಿ ಬಳ್‌ಸಿಕಣಿಕೆ ಸಹಕರ್‌ಸಿದ, ಒಡಹುಟ್ಟಿದವರಂಗೆ ಪ್ರೀತಿ ತೋರ್‌ಸುವ ದಂಪತಿಗ ಸೂದನ ಶ್ರೀ ಪೂಣಚ್ಚ – ರತ್ನಾವತಿ ಅವ್‌ಕೆ ನನ್ನ ಹೃದಯಪೂರ್ವಕ ಕೃತಜ್ಞತೆಗ.

ನನ್ನ ಬೊದ್ಕ್‌ನ ಪಾಲ್‌ದಾರ ಶ್ರೀ ಕೆ.ಡಿ. ದಯಾನಂದ ಮತ್ತೆ ಸಿನೇತರಂಗಿರ್‌ವ ನನ್ನೆರಡ್ ಮಕ್ಕ ಪೂಜಾ – ಶ್ರೀಜಾ, ಇವೆಲ್ಲವ್ ಕೊಡ್‌ತಿರ್‌ವ ಒತ್ತಾಸೆಗೆ ನಾ ಸದಾ ಋಣಿ.

ನಾ ಬರ್‌ದದ್‌ನ ಕುಸೀಲಿ ಓದಿ ಪ್ರತಿಕ್ರಿಯೆ ನೀಡ್‌ವಂತ ತವರ್‌ನವ್, ಕುಟುಂಬಸ್ಥರ್, ನೆಂಟಂಗ, ಸಿನೇತಂಗ, ನೆರೆಮನೆಯವ್, ಸಹೋದ್ಯೋಗಿಗ ಎಲ್ಲವ್ಕೂ ನನ್ನ ವಂದನೆಗ. ಎಲ್ಲೇ ತಪ್ಪಿದ್ದರೂ ಪ್ರೀತಿಲಿ ಒಪ್ಪಿಕಂಡ್ ಓದೀತ ನಿಮ್ಮೆಲ್ಲರ್‌ನ ವಿನಯಪೂರ್ವಕಾಗಿ ನಾ ಕೇಳಿಕಂಡನೆ.

। **ಕೊಟ್ಟಕೇರಿಯನ ಲೀಲಾ ದಯಾನಂದ**

ಉಪಮಂಡಲ ಅಭಿಯಂತರರು

(ಬಿ.ಎಸ್.ಎನ್.ಎಲ್.) ಮಡಿಕೇರಿ

9449858586

# ಮುನ್ನುಡಿ

ಕೊಟ್ಟಕೇರಿಯನ ಶ್ರೀಮತಿ ಲೀಲಾ ದಯಾನಂದನವರ್ದ್ ವೃತ್ತಿಲಿ ತಾಂತ್ರಿಕ ಕ್ಷೇತ್ರ, ಪ್ರವೃತ್ತಿಲಿ ಸಾಹಿತ್ಯ ಕ್ಷೇತ್ರ. ಕೊಡಗ್ ಜಿಲ್ಲೆನ ಬಿ.ಎಸ್.ಎನ್. ಎಲ್. ಸಂಸ್ಥೆಲಿ ಇಂಜಿನಿಯರ್ ಆಗಿ ಸೇವೆ ಮಾಡ್ತಿರುವ ಲೀಲಾನವು ಬರ್ದ 'ಅಟ್ಟಿ' ತೇಳ್ವ ಪುಸ್ತಕ ಅರೆಬಾಸೆಲಿ ಅವರ ಚೊಚ್ಚಲ ಕೊಡುಗೆ.

ಅರೆಬಾಸೆ ಮತ್ತೆ ಕನ್ನಡಲಿ ಇವು ಪದ್ಯ ಬರ್ದ್ ಕವಿಗೋಷ್ಠಿಗಳ್‌ಲಿ ಓದಿವೆ. ಅರೆಬಾಸೆಲಿ ಬರ್ದ ಭಕ್ತಿಗೀತೆಗ ಮಡಿಕೇರಿ ಆಕಾಶವಾಣಿಲಿ 'ಉದಯರಾಗ' ಭಕ್ತಿಗೀತೆಗಳ ವಿಭಾಗಲಿ ಒಮ್ಮೊಮ್ಮೆ ಪ್ರಸಾರ ಆದೆ. 'ಕೊಡಗು ಚಾನೆಲ್' ತೇಳ್ವ ಟಿ.ವಿ. ಮಾದ್ಯಮಲಿ 'ಗೌಡ ಬಂಧುಗ' ಕಾರ್ಯಕ್ರಮದ ಅರೆಬಾಸೆ ನಿರೂಪಕಿಯಾಗಿಯೂ ಕಾರ್ಯ ನಿರ್ವಹಿಸಿದ್ದೊ. ಹಿಂಗೆ ಸಾಹಿತ್ಯದ ತುಡಿತ ಇರುವ ಇವು ಈಗ ಪ್ರಬಂಧ ಬರೆವ ಸಾಸ ಮಾಡಿಯೊಳೊ. ಬೇರೆ ಬೇರೆ ವಿಸಯಗಳ ಆಯ್ಕೆ ಮಾಡಿಕಂಡ್ ಬರಹ ರೂಪಕ್ಕಿಳಿಸಿಯೊಳೊ. ಅವರ ಸಾಸ ಮೆಚ್ಚುವಂತದೇ. ಅಲ್ಲಿ ಇಲ್ಲಿ ಹೋಗಿ ಕ್ಷೇತ್ರ ಕಾರ್ಯ ಮಾಡಿ, ಕೆಲ ಪುಸ್ತಕಗಳ ಓದಿ ವಿಷಯ ಸಂಗ್ರಹ ಮಾಡಿಯೊಳೊ. ಏನಾರ್ ಗೊತ್ತಾಗದಿದ್ದರೆ, ಹೆಚ್ಚುವರಿ ಮಾಹಿತಿ ಬೇಕಾರೆ ಕೇಳಿ ತಿಳ್ಕಂಬ ದೊಡ್ಡ ಗುಣ ಅವರ್ದ್.

ಏನೋ ಒಂದ್ ಬರ್ದರಾತ್‌ತ್ತೇಳುವ ಉದಾಸೀನತೆ ಅವರ್ದಲ್ಲ. ಜವಾಬ್ದಾರಿಂದ ಕಾರ್ಯ ನೀಸುವ ಅವ್ ಅರೆಬಾಸೆ ಸಾಹಿತ್ಯಕ್ಕೆ 'ಅಟ್ಟಿ'ತ್ತೇಳುವ ಈ ಚೊಚ್ಚಲ ಕೃತಿನ ಅರ್ಪಸಿಯೊಳೊ.

ಒಟ್ಟು ಹದ್ನಾಕ್ ಲೇಖನಗ ಒಳೊ. ಲೇಖನಗಳ್ಲಿ ವಿಸಯಂದ ವಿಸಯಕ್ಕೆ ಹೋಕನ ಮುಂದೇನಿರ್ದುತ್ತೇಳ್ವ ಕುತೂಹಲ ಓದುಗಂದಾದೆ.

'ಮಡಿಕೇರಿನ ನೋಡಿಕೆ ಬನ್ನಿ' ತೇಳ್ದು ಪ್ರವಾಸಿಗರ್ನ ಕೈ ಬೀಸಿ ಕರೆವ ಲೇಖನ. ಐತಿಹಾಸಿಕ ವಿಚಾರದ ಕುರ್ತ್ ಈ ಲೇಖನ ಬೆಳ್ಕ್

ಚೆಲ್ಲಿದೆ.

ಈ ಮೇಲಿನ ಬರಹಕೆ ಪೂರಕ ಆಗಿ 'ಜಲಪಾತಗಳ ಜೊಂಪೆ ನಮ್ಮ ಕೊಡಗ್' ಲೇಖನ ಮೂಡಿ ಬಂದುಟು. ಹತ್ತೊಂಬತ್ತ್ ಜಲಪಾತಗಳ ವಿವರ ಅದರ‍್ಲಿ ಉಟ್ಟು. 'ಕೊಡಗ್‌ನ ಮಳೆಗಾಲದ ತೀನಿಗ' ತೇಳ್ವ ಲೇಖನ ಓದಿರೆ ಓದುಗನ ಬಾಯ್ಲಿ ಜೊಲ್ಲು ಬಾರದಿರಿಕಿಲೆತ್ತೇಳುವಂಗೆ ಈ ಲೇಖನ ಉಟ್ಟು.

'ಬೈಮನ ಮನೆನೂ ಬೈತೂರಪ್ಪನೂ' ತ್ತೇಳುವ ಲೇಖನಲಿ ಕರ್ನಾಟಕ ರಾಜ್ಯ ಮತ್ತೆ ಕೇರಳ ರಾಜ್ಯದ ನೊಡುಲಿ ಸಂಬಂಧ ಬೆಳ್ಸಿದ ಬೈತೂರಪ್ಪ ಈಶ್ವರ ದೇವಸ್ಥಾನದ ಇತಿಹಾಸ ತುಂಬಾ ಲಾಯ್ಕುಟ್ಟು. ಅದ್ ಹೆಂಗೆತ್ತೇಳ್ದರ ಈ ಲೇಖನಲಿ ವಿವರಾಗಿ ವರ್ಣಿಸಿಯೊಳೊ.

'ಕೊಡಗ್‌ನ ಕುಲದೇವಿ ಕಾವೇರಮ್ಮ' ಲೇಖನಲಿ ಏಳ್ ಪುಣ್ಯ ನದಿಗಳ್ಲಿ ಕಾವೇರಿನೂ ಒಂದ್. ಅದ್ ಕೊಡಗ್‌ನ ಜನರ ಪುಣ್ಯತ್ತೇಳ್‌ವ ಲೇಖಕಿ ಕಾವೇರಮ್ಮನ ಕೊಂಡಾಡಿಯೊಳೊ.

ಈ ಲೇಖನಕೆ ಸಂಬಂಧ ಇರುವಂಗೆ 'ಎರ್ಡನೇ ಕಾವೇರಿ ಕ್ಷೇತ್ರ ಬಲಮುರಿ'ತ್ತೇಳುವ ವಿಚಾರನ ಬರ್ದ್ ದಾಖಲೆ ಮಾಡಿ ಒಳ್ಳೆ ಕೆಲ್ಸ ಮಾಡಿಯೊಳೊ.

'ಕ್ರಾಂತಿವೀರ ಗುಡ್ಡೆಮನೆ ಅಪ್ಪಯ್ಯಗೌಡ' ನಂಗೆ ನಮ್ಮ ಭಾರತ ದೇಸ ಸ್ವಾತಂತ್ರ್ಯ ಪಡಿಯಕೆ ಅದೆಷ್ಟೋ ದೇಸಭಕ್ತಂಗ ಪ್ರಾಣ ಕೊಟ್ಟೊಳೊ. ಗೌಡ ಜನಾಂಗಲಿ ಸನ ಇಂತ ಅನೇಕ ಸೂರಂಗ ಹೋರಾಡಿ ಇತಿಹಾಸ ಆದೋ......" ಹಿಂಗೆ ಮುಂದುವರೆವ ಲೇಖನ ಕೊಡಗ್‌ನ ಇತಿಹಾಸದ ಮೇಲೆ ಬೆಳ್ಕ್ ಹರ್‌ಂಡಿದೆ.

'ಗೌಡ ಜನಾಂಗದ ಹೆಮ್ಮೆ ಕುರುಂಜಿ ಶ್ರೀ ವೆಂಕಟರಮಣ ಗೌಡ'ಲಿ ಒಬ್ಬ ವ್ಯಕ್ತಿ ಹೆಂಗೆ ಇತ್ತ್, ಹೆಂಗಾತ್, ಯಾಕೆ ಆತ್, ಒಳ್ಳದ್‌ಕೆ ಮನ್ಸ್ ಮಾಡ್ರೆ ಎಷ್ಟ್ ಒಳ್ಳೊಳ್ಳೆ ಕೆಲ್ಸ ಮಾಡಕ್‌ತ್ತೇಳ್ದರ ಕುರ್ತ್ ಬರ್ದ ಲೀಲಾನವು ಗೌಡರ ಸೇವೆನ ಕೊಂಡಾಡಿಯೊಳೊ.

'ಜಾಲ್‌ನ ಲಕ್ಷ್ಮಿ ಶ್ರೀತುಳಸಿ' ಅದೆಷ್ಟ್ ಪವಿತ್ರ, ಅದರ‍್ಲಿ ಇರುವ ಮೊದ್ದ್‌ನ ಗುಣ, ಪುರಾಣ ಪುಣ್ಯ ಕತೆಗಳ್ಲಿ ತುಳಸಿದ್ ವರ್ಣನೆ ಹೆಂಗಿತ್ತ್‌ತ್ತೇಳುವ ವಿವರ ಆ ಲೇಖನಲಿ ಉಟ್ಟು.

'ಹಸಿ ಹಸಿ ತಿಂದರೆ ಹಾಯಾಗಿರಕ್' ಲಿ ಹಣ್ಣ್ ಮತ್ತೆ ತರಕಾರಿಗಳ ಕುರ್ತ್ ಮಹತ್ವನ ಹೆಚ್ಚಿಸಿಯೊಳೊ. ತರಕಾರಿತ್ತೇಳ್ರೆ

ಮೊಕ ತಿರ್ಗುಸುವ ಈ ಹೊತ್ತ್‌ಲಿ ಇಂತ ಬರಹದ ಅಗತ್ಯ ಉಟ್ಟೇ ಉಟ್ಟು.

'ನಿಂಬುಳಿನ ನಾವ್ ನಂಬಕ್', ಓಹ್ ! ನಿಂಬುಳಿಲಿ ನಲ್ವತ್ಮೂರಕ್ಕೂ ಜಾಸ್ತಿ ಮೊದ್ದ್‌ನ ಗುಣಗ ಒಳೊತ ಆ ಪ್ರಬಂಧಲಿ ಮಾಹಿತಿ ಕೊಟ್ಟದ್ದಲ್ಲದೆ ಅದರ ತೊಪ್ಪೆಲಿರುವ ಗುಣಗಳ ಮಾಹಿತಿಗಳ್ನ ಸನ ಕೊಟ್ಟೊಳೊ. ಅಷ್ಟೇ ಅಲ್ಲ, ಅವರವರ ಮನೆ ಹಿತ್ತ್‌ಲ್‌ಲಿ ಒಂದಾದರೂ ನಿಂಬುಳಿ ಗಿಡ ನೆಟ್ಟ್‌ಕಣಿತ್ತೇಳ್ವ ಸಲಹೆನೂ ಕೊಟ್ಟೊಳೊ.

'ಕೋವಿಡ್ ಹತ್ತೊಂಬತ್ತರೊಟ್ಟಿಗೆ ನಮ್ಮ ಬೊದ್ಕ್' ಇಂದ್‌ನ ಸ್ಥಿತಿಗೆ ಹಿಡ್ದ ಕನ್ನಡಿಯಂಗೆ ಉಟ್ಟು ಈ ಲೇಖನ. ಎಚ್ಚರಿಕೆಂದ ಇದ್ದರೆ ಏನೂ ಆದುಲೇತ ಹೇಳ್ದ ಲೇಖಕಿ ಒಂದ್ ಒಳ್ಳೆ ಕತೆನೂ ಇಲ್ಲಿ ಪೋಣಿಸಿಯೊಳೊ.

'ಗಾಂಧೀಜಿನ ನೆಂಪುಗ' ಪ್ರಬಂಧಲಿ ಗಾಂಧೀಜಿನ ಸರಳ ಜೀವನ, ದಿನಕ್ಕೆ 18 ಕಿ.ಮೀ. ನಡೆತಿದ್ದ ವಿಚಾರ, ವಿಶ್ವನಾಯಕರೊಟ್ಟಿಗೆ ಗಾಂಧೀಜಿ ಕಾಗದ ವ್ಯವಹಾರ ಮಾಡ್ತಿದ್ದರ ಕುರ್ತ್, ದಕ್ಷಿಣ ಆಫ್ರಿಕಾಲಿ ಸೇನೆನ ಸೇರಿ ದುಡೇತಿದ್ದರ ಬಗ್ಗೆ ಶ್ರೀಮತಿ ಲೀಲಾನವು ಬರ್ದ್ ಓದುಗಂಗೆ ಆಶ್ಚರ್ಯ ಕೊಟ್ಟೊಳೊ. ಬಾಕಿ ವಿಚಾರ ತಿಳ್ಕಂಬ ಕಾತರ ಓದುಗಂಗೆ ಇದ್ದರೆ ಓದುಗ ಈ ಲೇಖನನ ಪೂರ್ತಿ ಓದಿಯೇ ಓದೊಕಾದೆ.

'ಅಟ್ಟಿ' ಪುಸ್ತಕದ ಕಡೇ ಪ್ರಬಂಧ 'ವಚನಗಳ್‌ಲಿ ದಾಂಪತ್ಯದ ಗುಟ್ಟ್' ತ್ತೇಳ್ದು. ಶರಣರ್ ತಾವ್ ಪಡ್ಕಂಡ ಅನುಭವಗಳ್ನ ವಚನಗಳ್‌ಲಿ ಹೇಳಿ ಸಾಮಾಜಿಕ ಮತ್ತೆ ಧಾರ್ಮಿಕ ಕ್ರಾಂತಿಗ ಒಟ್ಟಿಗೇ ಆಗುವಂಗೆ ಮಾಡ್ದೊ. "ಭಕ್ತಿ ಧರ್ಮದ ತಾಯಿಬೇರಾದರೆ, ಮುಕ್ತಿ ಧರ್ಮದ ಫಲ" ಇಂಥಾ ನುಡಿ ಮುತ್ತುಗಳೇ ತುಂಬಿದ ಪ್ರಬಂಧ ಇದ್. ಸಂಸಾರದ ಸುಕದುಕ್ಕಗಳಿಗೆ ಗಂಡ ಮತ್ತೆ ಹೆಣ್ಣ್ ಇಬ್ಬರೂ ಕಾರಣರಾದವೆತ್ತೇಳುವ ಲೀಲಾ ಅವರ ಸಾಂಸಾರಿಕ ಜೀವನದ ಕಳಕಳಿ ಮೆಚ್ಚುವಂಥದೇ. ಸಂಸಾರಿಗಳಿಗೆ ದಾರಿ ದೀಪದಂಗೆ ಉಟ್ಟು ಈ ಪ್ರಬಂಧ.

ಶ್ರೀಮತಿ ಲೀಲಾ ದಯಾನಂದನವರ್‌ಂದ ಅರೆಬಾಸೆ ಸಾಹಿತ್ಯಕ್ಕೆ ಇಂತ ಇನ್ನಷ್ಟ್ ಬರವಣಿಗೆಗ ಹರ್ದ್ ಬರ್ಲಿತ ಹಾರೈಸಿನೆ. ಲೀಲಾನವ್ಕೆ ಶುಭಾಶಯಗ.

**। ಬಾರಿಯಂಡ ಜೋಯಪ್ಪ**

**ಮದೆ.**

# ಅಟ್ಟಿ ಮಡ್‌ಗಿದ್

## ವಿಚಾರಗ





# ಮಡಿಕೇರಿನ ನೋಡಿಕೆ ಬನ್ನಿ

'ದಕ್ಷಿಣದ ಕಾಶ್ಮೀರ' ತೇಳ್ವ ಕೊಡ್‌ಗ್ ಜಿಲ್ಲೆನ ರಾಜಧಾನಿ 'ಮಡಿಕೇರಿ' ತನ್ನದೇ ಆದ ಪೊರ್ಲುಂದಾಗಿ 'ಮಂಜಿನ ನಗರಿ' ತ ಹೆಸ್‌ರಾವುಟು. ಹಾಲೇರಿ ರಾಜವಂಶಸ್ಥ ಮುದ್ದುರಾಜ ಕಟ್ಟಿದ ಊರ್ ಇದಾದ ಕಾರಣ ಪಂಡ್‌ಲಿ ಇದ್‌ನ 'ಮುದ್ದು ರಾಜನ ಕೇರಿ' ತ ಕರೀತಿದ್ದೊ. ಮತ್ತೆ ಇದ್ 'ಮಡಿಕೇರಿ' ಆತ್. ಇದ್‌ನ ಒಮ್ಮೆ ಆಳ್ದಂತ ಬ್ರಿಟಿಷ್‌ನವರ ಬಾಯ್‌ಲಿ ಇದ್ 'ಮರ್ಕೆರಾ' ಆಗಿತ್ತ್. ಕೊಡ್‌ಗ್‌ನ ಈ ಪಾಟಿ ಪೊರ್ಲುಗೆ ಒಂದ್ ಕಿರೀಟನಂಗೆ 'ಮಡಿಕೇರಿ' ಉಟ್ಟ್. ಎಲ್ಲಿ ನೋಡ್‌ರೂ ಸನ ಮಡ್‌ಚಿಕಂಬಂಗೆ ಕಾಂಬಂತ ರಸ್ತೆಗಳ್‌ಂದಾಗಿ ಏನಾರೂ 'ಮಡಿಕೇರಿ'ತ ಹೆಸರ್ ಬಂದಿರ್‌ದಾತ ನಂಗೆ ಅನ್‌ಸಿದೆ. ಯಾಗೋಳ್ ಸಾಮಾನ್ಯಾಗಿ ಮಂಜ್‌ನ ಹೊದಿಕೆಲಿ ಇರ್‌ವಂತ ಮಡಿಕೇರಿನ ಕವಿಗ ಹಾಡಿ ಹೊಗಳಿಯೊಳೊ. ಕವಿ ಜಿ.ಪಿ. ರಾಜರತ್ನಂ ಅವ್

"ಭೂಮಿ ತಬ್ಬಿದ್ ಮೋಡ್ ಇದ್ದಂಗೆ

ಬೆಳ್ಳಿ ಬಳಿದಿದ್ ರೋಡ್ ಇದ್ದಂಗೆ

ಸಾಫಾಗ್ ಅಳ್ಳ ತಿಟ್ಟಿಲ್ದಂಗೆ

ಮಡಿಕೇರಿಲಿ ಮಂಜು"ತ ಅವರ ಪದ್ಯಲಿ ಅವ್ವ ಕೂಸ್‌ನ ಪ್ರೀತಿಲಿ ಎತ್ತಿಕಂಡಂಗೆ, ಮಂಜು ಮಡಿಕೇರಿನ ಎದೆಗೊತ್ತಿಕಂಡಿತ್ತ್‌ತ ಹೇಳ್‌ದರ ಕೇಳ್‌ಕನ ಮೈ ರೋಮಾಂಚನಗೊಂಡದೆ. ಆ ಕವಿನ ಕಣ್ಣ್‌ಗೆ ಕೊಡ್‌ಗ್‌ನ ಪೂವಮ್ಮನವೆಲ್ಲಾ ತೆಳ್ಳನೆ – ಬೆಳ್ಳನೆ ಬಟ್ಟೆ ಹಾಕಂಡ್ ಬಂದಂಗೆ ಕಂಡವೆ! ಒಬ್ಬೊಬ್ಬಂಗೆ ಒಂದೊಂತರ ಕಾಂಬಂತ "ಮಂಜ್‌ನ ಮುಸ್‌ಕ್" ಮಡಿಕೇರಿನ ಪೊರ್ಲುನ ಗುಟ್ಟ್, ಸುತ್ತ ಮುತ್ತ ಇರ್‌ವ ಬೆಟ್ಟಗುಡ್ಡಗ, ಮಂಜ್‌ಲೇ ಮೀದ್

ಎದ್ದಂಗೆ ಕಾಂಬಂತ ಹಸ್ರ್‌ನ ಸಿರಿ, ಅಲ್ಲಲ್ಲಿ ಕಾಂಬಂತ ಕಣಿವೆಗ ಮಡಿಕೇರಿನ ಸ್ವರ್ಗವಾಗಿಸಿಟು.

ಮಂಗಳೂರ್‌ನ ಕಿನ್ನಿಗೋಳಿಂದ ನಮ್ಮಲ್ಲಿಗೆ ಬಂದಿದ್ದ ನನ್ನ ಕನ್ನಡದ ಗುರುಗ, ಉಪನ್ಯಾಸಕ ಶ್ರೀ ಶ್ರೀಧರ್ ಡಿ.ಎಸ್. ಅವು ಹಿಂಗೆ ಹೇಳ್‌ದೊ

"ಬ್ರಾಹ್ಮಣಿಕೆಯ ಗಂಧವೂ ಇಲ್ಲಾರಿ
ಆದರೂ ನಮ್ಮೂರು ಮಡಿ–ಕೇರಿ
ಮೇಲೆ ಕೆಳಗೆ ಅಲ್ಲಿ–ಇಲ್ಲಿ ಎಷ್ಟು 'ಮಡಿಕೆ 'ೀರೀ
ನಿಸರ್ಗದ ಚೆಲುವ ತನ್ನೊಳಗೆ ತುಂಬಿಕೊಂಡ ಮಡಿಕೇರಿ॥"

ಮಡಿಕೇರಿ ಹಕ್ಕಲೆ ನೋಡಿ ಕುಸಿ ಪಡ್‌ವಂತ ಸುಮಾರು ಜಾಗೆಗ ಒಳೊ.



**ಓಂಕಾರೇಶ್ವರ ದೇವಸ್ಥಾನ:** ಕೊಡ್‌ಗ್‌ನ ಪ್ರಸಿದ್ಧ ದೇವಸ್ಥಾನ ಇದ್. ಕ್ರಿ.ಶ. 1820 ರ್‌ಲಿ ಇಮ್ಮಡಿ ಲಿಂಗ ರಾಜೇಂದ್ರ ಕಟ್‌ಸಿದ ಈ ದೇವಸ್ಥಾನದ ವಾಸ್ತು "ಇಸ್ಲಾಮಿಕ್" ಶೈಲಿಲಿ ಉಟ್ಟ್. ಚೌಕಾಕಾರದ ಗರ್ಭಗೃಹಲಿ ಶಿವಲಿಂಗ ಉಟ್ಟ್. ಗರ್ಭಗೃಹದ ನೊಡುಲಿ ಒಳಗೆ ನುಗ್ಗಿ ಬಾಕೆ ಬಾಗ್ಲು ಇದ್ದ್, ಹೊರ್‌ಗಡೆ ಸುತ್ತ್ ಬಾಕೆ ಪ್ರಾಂಗಣನೂ ಉಟ್ಟ್. ಒಂದ್ ಪೊರ್ಲುನ ಗುಮ್ಮಟ, ಅದ್‌ರ ಮುಂಭಾಗಲೇ ಒಂದ್ ಕೆರೆ, ಅದ್‌ರ ತುಂಬಾ ಮೀನ್‌ಗ (ಮೀನ್‌ಗಳ್‌ನ ಯಾರೂ ಹಿಡಿಯಕಾಗದ್) ಅದ್‌ರ ಮದ್ಯೆಲಿ ಮಂಟಪ ಇದ್ದ್ ದೇವಸ್ಥಾನದ ವಿನ್ಯಾಸ ಬಾರೀ ಆಕರ್ಷಣೀಯ ಆವ್‌ಟ್. ದೇವಸ್ಥಾನಲಿರ್‌ವ ಶಿವನ ಉರಿಗಣ್ಣ್ ಜನಗಳ ಮೇಲೆ ಬೀಳದೆ ಸೀದಾ ಎದ್‌ರ್‌ಗಡೆ ಇರ್‌ವಂತ ಕೆರೆನ ಮೇಲೆ ಬಿದ್ದ್ ಶಾಂತಿಯಾಗಲೀತ ಹೇಳ್‌ನ ಉದ್ದೇಸಲಿ ಕೆರೆನ ನಿರ್ಮಿಸಿಯೊಳೋತ ಹೇಳ್‌ವೆ.

ಓಂಕಾರೇಶ್ವರ ದೇವಸ್ಥಾನದ ಇತಿಹಾಸನ ಗೊತ್ತ್‌ಮಾಡ್‌ವ ತಾಮ್ರಪತ್ರ ಇಲ್ಲಿ ಉಟ್ಟ್. ಈ ದೇವಸ್ಥಾನದ ನಿರ್ಮಾಣ ಹೆಂಗೆ ಆತ್‌ತ ಹೇಳ್ದಕೆ ಒಂದ್ ಹಿನ್ನೆಲೆ ಸನ ಉಟ್ಟ್, ಹಾಲೇರಿ ವಂಶದ ರಾಜ ಇಮ್ಮಡಿ ಲಿಂಗ ರಾಜೇಂದ್ರನವು

1811 ರಿಂದ 1820 ರ ಮುಟ್ಟ ಕೊಡ್‌ಗ್‌ನ ರಾಜ ಆಗಿ ಆಳಿಕಂಡಿದ್ದೊ. ಲಾಯ್‌ಕಲಿ ರಾಜ್ಯಭಾರ ಮಾಡ್‌ರೂ ಸನ ಕಂಡಕಂಡ ಹೆಣ್ಣು ಮಕ್ಕಳ ಸಾವಾಸ ಅವಂಗೆ ಕೆಟ್ಟ ಚಟ ಆಗಿತ್ತ್. ಪೊರ್ಲಿದ್ದ ಯಾವ ಗೂಡೆನೂ ಅಂವ ಬುಡ್‌ತಿತ್‌ಲೆಗಡ.

1817 ರ್‌ಲಿ ಒಂದಿನ ಒಬ್ಬ ಗರೀಬ ಹಾರಂವ ಅವನ ಮಗಳ್‌ನ ಕರ್‌ಕಂಡ್ ಮಡಿಕೇರಿಗೆ ಕಾಲ್ನಡಿಗೆಲಿ ಹೋಗ್‌ತಿತ್ತ್. ಪೊರ್ಲುನ ಮಗಳ್‌ನ ರಾಜಂಗೆ ಕೊಟ್ಟರೆ ಬೇಕಷ್ಟ್ ದುಡ್ಡ್-ಕಾಸ್ ಸಿಕ್ಕಿದೇತ ಅವಂನ ಲೆಕ್ಕಾಚಾರ! ದಾರಿಲಿ ಒಂದ್ ಮರದ ಅಡಿಲಿ ವಿಶ್ರಾಂತಿ ಪಡಿಯಕನ ಅವಂಗೆ ರಾಜಜೋಯಿಸ ಸುಬ್ಬರಸಯ್ಯ ಸಿಕ್ಕಿದೊ. ವಿಸಯ ಗೊತ್ತಾಗಿ ಅವ್ ಹಾರಂವಂಗೆ ಬುದ್ಧಿ ಹೇಳಿ ಗೂಡೆನ ಕರ್‌ಕಂಡ್ ವಾಪಾಸ್ ಹೋಗುವಂಗೆ ಮಾಡ್‌ದೊ. ಅದ್ ಹೆಂಗೋ ರಾಜಂಗೆ ಗೊತ್ತಾಗಿ ಸುಬ್ಬರಸಯ್ಯನ ಎಳ್‌ಕಂಡ್ ಬಾಕೆ ಸೈನಿಕರ್‌ನ ಕಳ್ಸಿತ್. ಶಿವಪೂಜೆ ಮಾಡ್‌ತಿದ್ದ ಜೋಯಿಸಂಗೆ ಅದ್‌ನ ಪೂರೈಸಿಕೂ ಬುಡದೆ ಅರಮನೆಗೆಳ್‌ಕಂಡ್ ಹೋದೊ. ತಾರಾಮಾರ ಬೊಯ್ದ ರಾಜ ಅವಂಗೆ ಒಡನೆ ಹೋಗಿ ಗೂಡೆನ ಕರ್ಕಂಬಾಕೆ ಹೇಳ್‌ತ್. ಸಜ್ಜನ ಜೋಯಿಸ ಇದ್‌ಕೆ ಒಪ್ಪಿತ್‌ಲೆ. ಚಾಟಿಯೇಟ್‌ನ ತಿಂದರೂ ಸನ ಅವ್ ಇದ್‌ಕೆ ಒಪ್ಪಿತೇಲೆ. ಜೋಯಿಸನ ಕೆಬಿಚಂಡೆಗೆ ಬುಟ್ಟರೂ ಕೆಂದಿತೇಲೆ. ಇಬ್ಬರ್ ಮಕ್ಕಳ್‌ನ ಎಳ್‌ಕಂಡ್ ಬಂದ್ ಜೋಯಿಸನ ಎದ್‌ರಿಗೇ ತಲೆ ಕಡ್‌ದರೂ ಶಿವಭಕ್ತ ಆ ಗೂಡೆನ ಬಗ್ಗೆ ಸುಳಿವು ಸನ ಕೊಟ್ಟತ್‌ಲೆ. ರಾಜಂಗೆ ಸಿಟ್ಟ್ ಬಂದ್ ಬೊತ್ತ್ ! ಕಡೇಲಿ ಜೋಯಿಸನ ಒಂದೊಂದೇ ಅಂಗಗಳ್‌ನ ಕಡ್‌ದ್ ಅವನ ಕೊಂದೇ ಬುಟ್ಟದೆ.

ಹಿಂಗಾಗಿ ಕೆಲದಿನಗಳ್‌ಲಿ ರಾಜಂಗೆ ಹಾರಂವನ ಕೊಂದ ಪಶ್ಚಾತ್ತಾಪ ಕಾಡಿಕೆ ಸುರುವಾತ್. ಬ್ರಹ್ಮಹತ್ಯೆ ಮಾಡ್‌ದ ಪಾಪ ಪ್ರಜ್ಞೆಲಿ ಅಂವ ನರಳ್‌ತ್. ದೆವ್ವ ಕಾಡ್‌ದಂಗೆ ಭ್ರಮೆಲಿ ಮನೋರೋಗಿ ಆತ್. ಮಂತ್ರವಾದಿಗಳ್‌ನೆಲ್ಲಾ ಕರ್‌ಸಿರೂ ಸನ ರಾಜ ಮಾಮೂಲಿನಂಗೆ ಆತೇಲೆ. ದಕ್ಷಿಣ ಕನ್ನಡ ಜಿಲ್ಲೆಲಿ ದೆವ್ವ-ಭೂತ ಬುಡ್‌ಸಿಕೆ ಆ ಕಾಲಲಿ ಹೆಸ್‌ರಾಗಿದ್ದ ನೀಲೇಶ್ವರ ತಂತ್ರಿಗ ಬಂದೊ. ಈ ಸುಬ್ಬರಸಯ್ಯ ಸತ್ತ ಮಾಮೂಲಿ ಭೂತ ಆತ್‌ಲೆ, ಬ್ರಹ್ಮ ರಾಕ್ಷಸ ಆಗಿ ಕಾಡ್‌ತಾ ಉಟ್ಟೊತ ತಂತ್ರಿಗೆ ಗೊತ್ತಾತ್. ಇವ್ ಸನ ಶಿವಭಕ್ತ ಆದ ಕಾರಣಂದ ಬ್ರಹ್ಮ ರಾಕ್ಷಸನ ತೊಲ್‌ಗಿಸಿಕೆ ರಾಜಂಗೆ ಉಪಾಯ ಹೇಳ್‌ತ್. ಸುಬ್ಬರಸಯ್ಯನ ಮನೆ ಇದ್ದ ಜಾಗೆಲಿ ಶಿವನ ದೇವಸ್ಥಾನ ಕಟ್ಟಿಸಿರೆ ಬ್ರಹ್ಮರಾಕ್ಷಸ ಅಲ್ಲಿ ಇರಿಕೆ ಕಷ್ಟಾದೇತ ಹೇಳ್‌ತ್. ಹಿಂದೆ ಮುಂದೆ ನೋಡದೆ ರಾಜ ಇದ್‌ಕೆ ಒಪ್ಪಿಕಂಡ್ ಶಿವ ದೇವಸ್ಥಾನನ ಕಟ್ಟ್‌ಸಿತ್. ಕಾಶಿಂದ ಓಂಕಾರೇಶ್ವರತೇಳ್ವ ಶಿವಲಿಂಗನ ತರ್‌ಸಿ, 26.03.1820ರ್‌ಲಿ ಸ್ಥಾಪಿಸಿ ಶಿವಪೂಜೆನ ಸುರು ಮಾಡ್‌ತ್. ದೇವಸ್ಥಾನದ ಎಡ್‌ದ ಭಾಗಲಿ ಸಂಪಿಗೆ ಗಿಡನೂ, ಬಲ್‌ದ ಭಾಗಲಿ ಅಶ್ವತ್ಥ ಮರನೂ ನೆಡ್‌ಸಿತ್. ಬ್ರಹ್ಮರಾಕ್ಷಸ ಸಂಪಿಗೆ ಮರಂದ ಅಶ್ವತ್ಥ ಮರಕೆ ಮಾತ್ರ ಓಡಾಡಿಕೆ ತಂತ್ರಿಗ ಅಪ್ಪಣೆ

ಕೊಟ್ಟೊಗಡ. ಹಿಂಗೆ ತಂತ್ರಿನ ಮಂತ್ರಂದ ರಾಜ ಉಸಾರಾಗಿ ರಾಜ್ಯಭಾರನ ಮುಂದ್‌ವರ್‌ಸಿತ್‌ಗಡ.

ಕಟ್ಟ್‌ಕತೇತ ಕಂಡರೂ ಸನ ಇತಿಹಾಸಕಾರ್‌ರ್ ಇದ್‌ನ "ಮೌಖಿಕ ಇತಿಹಾಸ" ಅಂದರೆ ಬಾಯಿಂದ ಬಾಯ್‌ಗೆ ಹರ್‌ದ್ ಬಂದ ಸತ್ಯತ ಒಪ್ಪಿಯೊಳೊ. ಇಂತ ಓಂಕಾರೇಶ್ವರಪ್ಪ ಕೊಡ್‌ಗ್‌ನ ಜನ್‌ರ ಕಾಪಾಡಿಕಂಡ್ ಬಂದುಟು.



**ರಾಜಾಸೀಟ್:** ಪಂಡ್‌ಲಿ ರಾಜಂಗ ರಾಣಿಯರ್‌ನ ಕರ್‌ಕಂಡ್ ಬಂದ್ ಸುತ್ತಾಡಿಕಂಡ್, ಸೂರ್ಯ ಮುಳ್‌ಗುದನ ನೋಡಿ ಕುಸಿ ಪಡ್‌ತಿದ್ದೊಗಡ. ಈ ಜಾಗನೇ ರಾಜಾಸೀಟ್‌ತ ಕರ್‌ದವೆ. ಅವ್ ಕುದ್‌ಕಣ್‌ತಿದ್ದ ನಾಕ್ ಕಾಲ್‌ನ ಪೊರ್ಲುನ ಮಂಟಪ ಈಗೊಳೂ ಹಂಗೇ ಉಟ್ಟ್. ಅಲ್ಲಿಂದ ನಿತ್ತ್ ನೋಡ್‌ರೆ ಪ್ರಕೃತಿನ ಪೊರ್ಲುನ ರಾಶಿ ಕಣ್ಣ್-ಮನ್‌ಸ್‌ನ ತುಂಬಿದೆ. ಬೆಟ್ಟಗುಡ್ಡ, ಹಸ್‌ರ್ ಕಣಿವೆಗಳ ಸಾಲ್, ಹೊಲಗದ್ದೆಗಳ ನೋಟ ಎಲ್ಲನೂ ಲಾಯ್‌ಕ ಇಲ್ಲಿ. ಬಿಸಿಲಿರ್‌ಕನ ನೋಡ್‌ರೆ ಮಡಿಕೇರಿಂದ ಗುಡ್ಡ ದಾಟಿಕಂಡ್ ಇಳ್‌ದ್ ಮಂಗಳೂರು ಕಡೆಗೆ ಹೊರ್‌ಟಂತ ರಸ್ತೆಗ ಸುರುಳಿ ಸುತ್ತಿದಂಗೆ ದೂರಂದ ಕಂಡವೆ. ಮಂಜು ಮುಸ್‌ಕಿದ ಮೇಲೆ ಇಲ್ಲೇ ಬಂದ್ ನೋಡ್‌ರೆ ದೃಶ್ಯನೇ ಬೇರೆ. ಆಕಾಸ ಭೂಮಿ ಎಲ್ಲಾ ಒಂದಾಗಿ ಸಾಗರದಂಗೆ ಕಂಡದೆ ! ಈ ರಾಜಾಸೀಟ್ ಒಮ್ಮೆ ನೋಡ್‌ದಂಗೆ ಇನ್ನೊಮ್ಮೆ ಇರ್‌ದುಲೆ. ಇಲ್ಲಿ ಈಗ ಹೂತೋಟ, ಸಂಗೀತ ಕಾರಂಜಿನೂ ಆವ್‌ಟ್.

ಸೂರ್ಯ ಕಂತ್‌ಕನ ಅಲ್ಲಿನ ಪೊರ್ಲುನ ಒಮ್ಮೆಯಾದರೂ ಬೊದ್ಕ್‌ಲಿ ನೋಡೊಕು. ಮಕ್ಕಳಿಗಾಗಿ "ಬಾಬಾ ಸಾಹೇಬ್ ಎಕ್ಸ್‌ಪ್ರೆಸ್" ಪುಟಾಣಿ ರೈಲು, ಆಟದ ಮೈದಾನನೂ ಉಟ್ಟ್. ಹಕ್ಕಲೆ ಕಾಂಬೊದು ಕುಂದುರುಮೊಟ್ಟೆ ಚೌಟಿ ಮಾರಿಯಮ್ಮ ದೇವಸ್ಥಾನ.

**ಗಾಂಧಿ ಮಂಟಪ:** ರಾಜಸೀಟ್‌ಂದ ಒಂದ್ ಫರ್ಲಾಂಗ್ ದೂರಲಿ ಇದ್ ಉಟ್ಟ್. ಮಡಿಕೇರಿಗೆ ಮಹಾತ್ಮ ಗಾಂಧಿಯವ್ ಬಂದಿರ್‌ಕನ ಈ ಜಾಗೆಗೆ ಬಂದಿದ್ದ ನೆಂಪುಲಿ 'ಗಾಂಧಿ ಮಂಟಪ' ನಿರ್ಮಾಣ ಆವ್‌ಟು. ಈ ಅಪರೂಪದ ಸ್ಮಾರಕದ ಒಳ್‌ಗಡೆ ಗಾಂಧಿನ ಪ್ರತಿಮೆನ ನಾವ್ ನೋಡಕ್. ಇದ್‌ರ ಎದ್‌ರಿಗೆ ಆಡಿಕೆ ಮೈದಾನನೂ ಉಟ್ಟ್. 'ಗಾಂಧಿ ಮೈದಾನ' ತ ಇದ್‌ನ ಕರ್‌ದವೆ.

**ನೆಹರು ಮಂಟಪ:** ರಾಜಾಸೀಟ್‌ಂದ ಅರ್ಧ ಕಿಲೋಮೀಟರ್ ದೂರಲಿ ಆಕಾಶವಾಣಿ ಕೇಂದ್ರ ಮತ್ತೆ ದೂರದರ್ಶನ ಮರು ಪ್ರಸಾರ ಕೇಂದ್ರ ಕಟ್ಟಡಗಳ ಹಿಂಬಾಗಲಿ

ಈ ಮಂಟಪ ಕಂಡದೆ. ನೆಹರುನವ್ ಮಡಿಕೇರಿಗೆ ಬಂದಿರ್‌ಕನ ಈ ಜಾಗೆಲಿ ನಿತ್ತ್‌ಕಂಡ್ ನಿಸರ್ಗದ ಪೊರ್ಲುನ ನೋಡ್‌ದ ನೆಂಪುಲಿ ಈ ಮಂಟಪದ ಸ್ಥಾಪನೆ ಆವ್‌ಟು.

**ರಾಜ ಗದ್ದುಗೆಗ:** ಕೊಡ್‌ಗ್‌ನ ಆಳ್ದ ರಾಜರ ಗೋರಿಗಳ್‌ನ ಇಲ್ಲಿ ನಾವ್ ನೋಡಕ್. ಮಹದೇವಪೇಟೆನ ದಿಬ್ಬದ ಮೇಲೆ ಇರ್‌ವ ರಾಜಗದ್ದುಗೆಗ "ಇಂಡೋ ಸಾರ್ಸೆನಿಕ್ ಶೈಲಿ"ಲಿ ಒಳದ್. ಕೊಡ್‌ಗ್‌ನಾಳ್ದ ರಾಜ ವೀರರಾಜೇಂದ್ರ, ಮಹದೇವಮ್ಮಾಜಿ ಮತ್ತೆ ನೊಡುಲಿ ಲಿಂಗರಾಜೇಂದ್ರನ ಗೋರಿಗ ಒಳೊ. ರಾಜನ ಗುರುವಾಗಿದ್ದ ರುದ್ರಪ್ಪನ ಸಮಾಧಿ ಸನ ಇಲ್ಲಿ ಉಟ್ಟ್. ಈ ಗದ್ದುಗೆಗಳ್‌ಗೆ ಚಿನ್ನ ಲೇಪಿಸಿಕಂಡಿರ್‌ವಂತ ನಾಕ್ ಗೋಪುರಗ, ಅವ್‌ಗಳ ಮದ್ಯೆಲಿ ಒಂದ್ ಗುಮ್ಮಟನೂ ಉಟ್ಟ್. ಕಿಡ್‌ಕಿನ ಸರಳ್‌ಗಳ್‌ನೆಲ್ಲಾ ಹಿತ್ತಾಳೆಲಿ ಮಾಡ್ಯೊಳೊ. ಅವ್‌ಗಳ ನೊಡುಲಿ ಲಾಯ್‌ಕಾದ ಕುಸುರಿ ಕೆತ್ತನೆಗ ಒಳೊ.

**ಅರಮನೆ:** ಭದ್ರವಾದಂತ ಕೋಟೆನ ಮದ್ಯೆಲಿರ್‌ವ ಅರಮನೆ ರಾಜರ 'ಸೌಂದರ್ಯ ಪ್ರಜ್ಞೆ'ಗೆ ಸಾಕ್ಷಿಯಾಗಿ ಕುದ್ದ್‌ಟ್. ಇಂದ್ ಸುಣ್ಣ–ಬಣ್ಣ ಸರ್‌ಯಾಗಿ ಇಲ್ಲದೆ ಮಂಕಾವ್‌ಟ್. 1814ರ್‌ಲಿ ಅಂದ್‌ನ ರಾಜ 2ನೇ ಲಿಂಗರಾಜೇಂದ್ರ ಕಟ್‌ಸಿದ ಇಟ್ಟಿಗೆ ಗಾರೆನ ಅರಮನೆಲಿ ಎರ್‌ಡ್ ಉಪ್ಪರಿಗೆಗ (ಮಾಳಿಗೆಗ) ಇದ್ದ್ ನೂರು ಅಡಿ ಉದ್ದಲುಟ್ಟು. ಮಾಡಿಗೆ ಅಂಟಿಕಂಡ್ ಇರ್‌ವ ಮರಲಿ ಮಾಡ್‌ದ ಎರ್‌ಡ್ ಕುದುರೆಗಳ್‌ನ ನೋಡಿಕೆ ಬಾರೀ ಕುಸಿಯಾದೆ. ಯೂರೋಪಿಯನ್ ವಾಸ್ತು ಶೈಲಿಲಿ ಮಾಡ್‌ದ ಅರಮನೆ ಒಳಭಾಗದ ಜಾಲ್‌ಲಿ ರಾಜರ ಕಾಲಲಿ ಗುಟ್ಟ್‌ಲಿ ಓಡಾಡಿಕೆ ದಾರಿಯಾಗಿದ್ದ ದೊಡ್ಡ ಕಲ್ಲ್‌ಲಿ ಮಾಡ್‌ದ ಆಮೆನ ಬಾಗ್ಲು ಕಂಡದೆ. ವೀರ ರಾಜೇಂದ್ರನ ಗುರ್‌ತ್‌ಗಾಗಿ 'ವಿ' ಆಕಾರಲಿ ಸಂಕೇತಗ ಒಳೊ. ಅರಮನೆನ ಎರ್‌ಡ್ ಸಾರಿ ಸರಿಮಾಡ್‌ಸಿದ ಬ್ರಿಟಿಸ್‌ನವ್ ಗಂಟೆ ಗೋಪುರನ ಮತ್ತೆ ಕೈಯಾಲೆನ ಸನ ಮಾಡ್‌ಸಿದ್ದೊ.

**ಮಡಿಕೇರಿ ಕೋಟೆ:** ಈ ಕೋಟೆ ನಾವ್‌ಗೆ ರಾಜರ ಕಾಲದ ವೈಭವನ ಗ್ಯಾನ ಬರ್‌ಸಿದೆ. ಬಾರೀ ಗಾತ್ರದ ಅಷ್ಟೇ ಪೊರ್ಲುನ ಕೋಟೆನ ವಿನ್ಯಾಸ ಆಶ್ಚರ್ಯ ಉಂಟ್ ಮಾಡ್‌ದೆ. ಮಡಿಕೇರಿನ ನಿರ್ಮಿಸಿದ ಮುದ್ದುರಾಜ ಸ್ವತ ತಾನೇ ನಿತ್ತ್‌ಕಂಡ್ ಮಣ್ಣ್‌ಲೇ ಈ ಕೋಟೆನ ಕಟ್ಟ್‌ಸಿತ್ತ್‌ಗಡ. ಟಿಪ್ಪುನ ಕಾಲಲಿ ಈ ಕೋಟೆನ ಅಂವ ಕಲ್ಲ್‌ಲಿ ಕಟ್ಟ್‌ಸಿತ್‌ಗಡ. ಅಲ್ಲಲ್ಲಿ ಕಾವಲಿಗೆ ಸೈನಿಕರು ನಿತ್ತರೆ ಹೊರ್‌ಗಿಂದ ಬಾವಂತ ವೈರಿಗ ಕಾಂಬಂಗೆ ನಿರ್ಮಿಸಿದ ಸಣ್ಣ ಕೋಂಬರೆಗ ಒಳೊ. ಕೋವಿ ಹಿಡ್‌ಕಂಡ್ ವೈರಿಗಳ್‌ಗೆ ಕಾಣದಂಗೆ ಹೊಡಿಯಕೆನೂ ವ್ಯವಸ್ಥೆ ಉಟ್ಟ್. ಕೋಟೆಯೊಳಗೆ ನಿಜದ ಆನೆಗಳಂಗೆ ಕಾಂಬ ಸಿಮೆಂಟ್ ಗಾರೆಂದ ಮಾಡ್‌ದ ಆನೆಗ ಒಳೊ. ಸಿಟ್ಟ್ ಬಂದ್ ಪಟ್ಟದ ಆನೆನ ಕೊಂದ ತಪ್ಪಿಗೆ ಪಶ್ಚಾತ್ತಾಪಲಿ ಈ ಆನೆಗಳ್‌ನ ರಾಜ ವೀರರಾಜೇಂದ್ರ ನಿರ್ಮಿಸಿತ್‌ಗಡ, ಯಾಗೋಳ್ ಹೊತಾರೆ ಎದ್ದ್ ರಾಜ ಕಿಡ್‌ಕೆಂದ ಆನೆಗಳ್‌ನ

ನೋಡ್‌ದೂ, ಆನೆಗ ಸೊಂಡಿಲೆತ್ತಿ ನಮಸ್ಕಾರ ಮಾಡ್‌ದೂ ಪದ್ಧತಿಯಾಗಿತ್ತ್‌ಗಡ. ಹಿಂಗಿರ್‌ಕನ ಒಮ್ಮೆ ರಾಜ ಯಾಗೋಳ್‌ನಂಗೆ ಕಿಡ್‌ಕಿ ತೆಗ್‌ದರೂ ಸನ ಆನೆಗ ಮಸ್‌ಗಿತ್‌ಲೆ. ರಾಜಂಗೆ ಬಾರೀ ಸಿಟ್ಟ್ ಬಾತ್. ಹಿಂದೆ ಮುಂದೆ ಗ್ಯಾನ ಮಾಡದೆ ಕೋವಿ ತೆಗ್‌ದ್ ಗುಂಡು ಹೊಡ್‌ತ್. ಹಿಂಗೆ ಆನೆಗಳ್‌ನ ಕೊಂದಾದ ಮೇಲೆ ಅವ್‌ಕೆ ಅಂದ್ ಸೌಖ್ಯ ಇತ್ತ್‌ಲೇತ ಅವಂಗೆ ಗೊತ್ತಾಗಿ ಬಾರೀ ಬೇಜಾರಾತ್. ಅದೇ ಪಶ್ಚಾತ್ತಾಪಲಿ ಇಂದ್ ನಾವ್ ನೋಡ್‌ವ ಅನೆಗಳ್‌ನ ಕಟ್ಟ್‌ಸಿತ್‌ಗಡ.

ಕೋಟೆಯೊಳಗೆ ಆಂಗ್ಲಿಕನ್ ಚರ್ಚ್ ಸನ ಕಂಡದೆ. 1855ರ್‌ಲಿ ಈ ಜಾಗೆಲಿದ್ದ ವೀರಭದ್ರಗುಡಿನ ಮಟ್ಟ ಹಾಕಿ ಬ್ರಿಟಿಸ್‌ನವ್ ಚರ್ಚ್‌ನ ಕಟ್ಟಿದೊ. ಗೋಥಿಕ್ ಶೈಲಿಲಿ ಇದ್‌ರ ನಿರ್ಮಾಣ ಆವ್‌ಟು. ಬಣ್ಣ ಬಣ್ಣದ ಚಿತ್ರಂದ ಕೂಡ್‌ದ ಕನ್ನಡಿಗ ಇರ್‌ವ ಈ ಚರ್ಚ್ ಈಗ ಹಳೇ ವಸ್ತುಗಳ ಸಂಗ್ರಹಾಲಯ ಆವ್‌ಟು. ಇದ್ ಕರ್ನಾಟಕ ರಾಜ್ಯ ಸರ್ಕಾರದ ಪ್ರಾಚ್ಯ ವಸ್ತು ಇಲಾಖೆನ ಉಸ್ತುವಾರಿಲಿ ಉಟ್ಟ್. ಕೊಡಗ್‌ನ ಇತಿಹಾಸನ ತಿಳ್‌ಸುವ ಸುಮಾರ್ ಹಳೇ ವಸ್ತುಗ, ಆಯುಧಗ, ಬಟ್ಟೆ-ಬರಿಗ, ತಿರಿ-ತೋಕ್, ವೀರಗಲ್ಲ್, ಮಾಸ್ತಿಕಲ್ಲ್, ಪಂಡ್‌ಕಾಲದ ಗೌಜಿನ ಸಾರಿ ಹೇಳ್‌ವೆ. ಪಂಡ್‌ಕಾಲಲಿ ರಾಜಂಗ ಮತ್ತೆ ಸೈನಿಕಂಗ ಉಪಯೋಗಿಸ್‌ತಿದ್ದ ಫಿರಂಗಿಗ ಸಂಗ್ರಹಾಲಯದ ಒಳಗೂ ಹೊರಗೂ ಒಳೊ. ಸ್ವತಂತ್ರ ಭಾರತದ ಸುರೂನ ಸೇನಾನಿ, ಭೂಸೇನನ ಸುರೂನ ಮಹಾ ದಂಡನಾಯಕ ಫೀಲ್ಡ್ ಮಾರ್ಷಲ್ ಕಾರ್ಯಪ್ಪನವ್ ಸನ ಅವ್‌ಕೆ ಸಿಕ್ಕಿದ ಪ್ರಶಸ್ತಿಗಳ್‌ನ, ಇನಾಮ್‌ಗಳ್‌ನ ಇಲ್ಲಿಗೆ ಕೊಟ್ಟೊಳೊ. ಅವೆಲ್ಲನ ನಾವಿಲ್ಲಿ ನೋಡಕ್.

**ಜನರಲ್ ತಿಮ್ಮಯ್ಯ ಸ್ಮಾರಕ:** ಮಹಾ ಸೂರ ಸೇನಾನಿ ಜನರಲ್ ಕೊಂಡಂದೇರ ಎಸ್. ತಿಮ್ಮಯ್ಯ ಅವರ ಮನೆ 'ಸನ್ನಿಸೈಡ್' 2020ನೇ ಇಸ್‌ವಿ ಫೆಬ್ರವರಿ 6 ರ್‌ಲಿ ಸ್ಮಾರಕ ಆಗಿ ಮಾರ್ಪಾಡಾತ್. ರಾಷ್ಟ್ರಪತಿ ಶ್ರೀ ರಾಮನಾಥ್ ಕೋವಿಂದ್ ಅವು ಇದ್‌ರ ಉದ್ಘಾಟನೆ ಮಾಡ್‌ದೊ. ಅದ್‌ಕೆ ಮುಂದೆ ಆರ್.ಟಿ.ಒ. ಕಚೇರಿ ಆಗಿದ್ದ ಅದ್ ಈಗ 'ಮ್ಯೂಸಿಯಂ' ಆಗಿ ಪ್ರವಾಸಿಗರ್‌ನ ಆಕರ್ಷಿಸ್‌ತಾ ಉಟ್ಟ್. ಜನರಲ್ ತಿಮ್ಮಯ್ಯ ಅವ್‌ರ ಬೊದ್ಕ್‌ನ ಇತಿಹಾಸದ ಬಗ್ಗೆ ತಿಳ್‌ಸುವ ಈ 'ಮ್ಯೂಸಿಯಂ' ಸೈನ್ಯಕೆ ಸೇರಿ ದೇಸ ಸೇವೆ ಮಾಡಿಕೆ ಸ್ಫೂರ್ತಿನ ನೀಡ್‌ತಾ ಉಟ್ಟ್.

'ಸನ್ನಿಸೈಡ್‌ಗೆ ಕಾಲಿಟ್ಟಂಗೇ ಸೈನಿಕನ ದಪ್ಪಗಿರ್‌ವ ಶೂಸ್‌ನ ನೋಡಿಕೆ ಬಾರೀ ಪೊರ್ಲು. ಸೈನಿಕನ ಪಾದಗಳ್‌ನ ಕಾಪಾಡಿ ದೇಸ ಸೇವೆಗೆ ಸಾಯ ಮಾಡ್‌ವ ಶೂಸ್‌ನ ಇಲ್ಲಿಟ್ಟದ್ ಬಾರೀ ಅರ್ಥ ಕೊಟ್ಟದೆ. ಈ 'ಮ್ಯೂಸಿಯಂ'ನ ಸುರೂನ ಕೋಂಬರೆಲಿ





ಅವ್ ಹಾಕಿಕಣ್‌ತಿದ್ದ ಸೇನಾ ಸಮವಸ್ತ್ರನ ಇಸಿಯೊಳೊ. ಎರ್‌ಡನೇ ಕೋಂಬರೆಲಿ ಕೊಡವ ಜನಾಂಗದ ಸಂಪ್ರದಾಯಗಳ್‌ನ ಸಾರ್‌ವಂತ ಚಿತ್ರಗಳ್‌ನ ನಾವ್ ನೋಡಕ್. ಕೊಡವರ ಆಭರಣಗಳಾದ ಒಡಿಕತ್ತಿ, ಪೀಚೆಕತ್ತಿ, ಪತ್ತಾಕ್, ಮದುವೆಲಿ ಬಾಳೆ ಕಡಿಯೊದು, ದೇವಸ್ಥಾನಲಿ ಜಿಂಕೆ ಕೊಂಬೊಟ್ಟಿಗೆ 'ಕೊಂಬಾಟ್ ಕೊಣ್‌ತ', ದೈವ ತೆರೆಗಳ್‌ನ ನಾವಿಲ್ಲಿ ನೋಡಕ್. ಈ ಕೋಂಬರೆಗೆ 'ನನ್ನ ಬೇರ್ ಕೊಡವ ಸಂಸ್ಕೃತಿ'ತ ಹೆಸ್‌ರ್‌ನ ಇಸಿಯೊಳೊ. ಮೂರನೇ ಕೋಂಬರೆಲಿ ಪಂಡ್‌ಲಿ ಅವ್ ಉಪಯೋಗಿಸ್‌ತಿದ್ದ ಕಟ್ಲ್ ಸೇರ್‌ದಂಗೆ ಬೇರೆ ಬೇರೆ ಪೀಠೋಪಕರಣಗಳ್‌ನ ಪೊರ್ಲುಲಿ ಜೋಡ್‌ಸಿಯೊಳೊ.

ಈ ಮ್ಯೂಸಿಯಂನ ಒಂದ್ ಕೋಂಬರೆಲಿ ಜನರಲ್ ತಿಮ್ಮಯ್ಯನವ್ ಸಣ್ಣದಿರ್‌ಕನ ಮಾಡ್‌ತಿದ್ದ ತುಂಟಾಟಗ, ಕೀಟ್ಲೆಗ, ಇಸ್ಕೂಲ್‌ನ ಬಗ್ಗೆ ಎಲ್ಲಾ ವಿವರಗ ಒಳೊ. "ನೀನಾ" ತೇಳ್ವ ಹೆಸರ್‌ನ ಕೋಂಬರೆಲಿ ಹೆಸರ್‌ವಾಸಿ ನೃತ್ಯಗಾರ್ತಿಯಾಗಿದ್ದ ಜನರಲ್ ತಿಮ್ಮಯ್ಯನವರ ಹೆಣ್ಣ್ 'ನೀನಾ' ಅವರ ಕೊಣ್‌ತದ ಬೇರೆ ಬೇರೆ ಭಂಗಿಗಳ ಫೋಟೋಗಳ್‌ನ ಇಸಿಯೊಳೊ. ಒಬ್ಬ ಸೈನಿಕನ ಹೆಣ್ಣಾಗಿ 'ಕ್ವೆಟ್ಟ'ತೇಳ್ವ ಜಾಗೆಲಿ ಭೂಕಂಪ ಆಗಿರ್‌ಕನ ಅವ್ ಮಾಡ್‌ದ ಜನಸೇವೆನ ಬಗ್ಗೆ ವಿವರನೂ ಉಟ್ಟು.

ಇನ್ನೊಂದ್ ಕೋಂಬರೆಲಿ 'ಕುಮಾವೊ' ರೆಜಿಮೆಂಟ್‌ನ ವಿಸೇಸತೆನ ಬಗ್ಗೆ ಎಲ್ಲಾ ವಿವರಗ ಒಳೊ. ತಿಮ್ಮಯ್ಯನವರ ಬರಹಗ, ಯುದ್ಧಕಾಲಲಿ ಉಪಯೋಗಿಸ್‌ತಿದ್ದ ಬೇರೆ ಬೇರೆ ಶಸ್ತ್ರಾಸ್ತ್ರಗಳ್‌ನ ಸನ ಇಲ್ಲಿ ಪ್ರದರ್ಶನಕೆ ಇಸಿಯೊಳೊ. "ತಿಮ್ಮಯ್ಯ"ತ ಹೆಸ್‌ರ್ ಇಸಿಕಂಡ ಕೋಂಬರೆಲಿ ಅವು ವಿದೇಸಲಿ ಮಾಡಿದ್ದ ಸೇವೆಗಳ ಬಗ್ಗೆ ವಿವರಗ ಒಳೊ. ಅವರ ಸೇನಾ ಬೊದ್ಕ್‌ನ ಬಗ್ಗೆ 15 ನಿಮಿಸದ ಸಾಕ್ಷ್ಯಚಿತ್ರನೂ ಇಲ್ಲಿ ನೋಡಕ್.

ಮಕ್ಕಳಿಗೆ ಸೇನೆ ಬಗ್ಗೆ ಆಸಕ್ತಿ ಹುಟ್ಸ್‌ಸಿಕೆ ರಾಕೆಟ್ ಲಾಂಚರ್, ಬಂದೂಕುಗ ಎಲ್ಲನೂ ಜೋಡ್‌ಸಿಟ್ಟೊಳೊ. ಮ್ಯೂಸಿಯಂನ ಹೊರಬದಿಲಿ ಅಲ್ಲೇ ಹಕ್ಕಲೆ ಭೂಸೇನೆ, ನೌಕಾಸೇನೆ ಮತ್ತೆ ವಾಯುಸೇನೆಗಳ ಪರಿಶ್ರಮನ ಬಿಂಬ್‌ಸುವಂತ ಯುದ್ಧ ಟ್ಯಾಂಕ್, ಲಂಗರ್, ಯುದ್ಧ ವಿಮಾನಗ ಎಲ್ಲನೂ ಒಳೊ, ಮ್ಯೂಸಿಯಂನ ಹಿಂದ್‌ಗಡೆಲಿ ಯುದ್ಧ ಸ್ಮಾರಕ 'ಅಮರ್ ಜವಾನ್' ಉಟ್ಟು. ಭಾರತೀಯ ಸೈನ್ಯ ಪರಂಪರೆನ ಇಡೀ ಚಿತ್ರಣನ ನಾವು ಈ ಮ್ಯೂಸಿಯಂಲಿ ಕಂಡವೆ. ಭಾರತದ

ಸೇನೆಂದ ತಕಂಬಂದ 27 ತರದ ಸೇನಾ ಕೋವಿಗಳ್‌ನ ಇಲ್ಲಿ ನೋಡಿಕಾಗಿ ಮಡ್‌ಗಿಯೊಳೊ. ವಿಸೇಸತೇಕ್ರೆ ಇಲ್ಲಿ ಕೋವಿಗಳ್‌ನ ಮುಟ್ಟಿಕೆ, ಹಿಡ್‌ಕಂಡ್ ಫೋಟೋ ತೆಗಿಯಕೆ ಸನ ಬುಟ್ಟವೆ.

ಪುಣೆಲಿರ್‌ವ 'ಕರ್ಕಿ'ತೇಕ್ವ ಸೇನಾ ಶಿಬಿರಲಿದ್ದ ಯುದ್ಧ ಟ್ಯಾಂಕರ್ ಈ 'ಮ್ಯೂಸಿಯಂ' ನ ಆಕರ್ಷಣೆಗಳ್‌ಲಿ ಒಂದ್. 40ಟನ್ ತೂಕದ ಈ ಟ್ಯಾಂಕರ್‌ನ ರಷ್ಯಾಲಿ ನಿರ್ಮಿಸಿದ್ದೊ. ಇದ್ 1971ರ ಭಾರತ–ಪಾಕ್ ಯುದ್ಧಲಿ ಮುಖ್ಯ ಪಾತ್ರ ವಹಿಸಿತ್ತ್‌ಗಡ. 15 ವರ್ಷದ ಮುಂದೆನೇ ಇದ್‌ನ ಸೇನೆಂದ ಹೊರಗಿಟ್ಟಿದ್ದೊ. ಅಂದಾಜ್ 40–45 ಲಕ್ಷ ಬೆಲೆ ಬಾಳ್‌ದೆ ಇದ್. ದೇಸದ ಬೇರೆ ಬೇರೆ ಸೇನೆಗಳ ಶಸ್ತ್ರಾಸ್ತ್ರ ಡಿಪೋಗಳ್‌ಂದ ಸಂಗ್ರಹ ಮಾಡ್‌ದ 25 ಮಿಷನ್‌ಗನ್‌ಗ, 'ಸೆಲ್ಫ್ ಲೋಡಿಂಗ್' ರೈಫಲ್‌ಗ, ಲೈಟ್ ಮೆಷಿನ್‌ಗನ್, ಮೀಡಿಯಾ ಸೆಮಿ ಮಿಷನ್ ಕಾರ್ಬೈನ್ ಗನ್, ಪಾಯಿಂಟ್ 38 ಎಂ.ಎಂ. ರೈಫಲ್, ಬಝೂಕಾ ರಾಕೆಟ್ ಲಾಂಚರ್‌ಗಳ್‌ನ ಇಲ್ಲಿ ಇಸಿಯೊಳೊ.

ಮ್ಯೂಸಿಯಂನೊಳಗೆ ಹೋಗ್‌ತಿದ್ದಂಗೇ, "ನಮ್ಮ ಮನೆಗೆ ಬನ್ನಿ , ನಾನ್ ಸಣ್ಣ ಹೈದಂದ ದೊಡ್ಡ ಹುದ್ದೆಗೆ ಏರಿಕೆ ಮುಟ್ಟ ನನ್ನ ಬೊದುಕ್ ಹೆಂಗೆ ನಡ್‌ತೂತ ನೀವ್‌ಗೆ ತೋರ್‌ಸಿಕೆ ಪ್ರಯತ್ನ ಪಟ್ಟನೆ. ಇದ್‌ರಿಂದಾಗಿ ನನ್ನಂತ ಹುದ್ದೆಗೆ ಹೋಕೆ ಯಾವಂಗಾದರೂ ಸಾದ್ಯಾಗಲಿ" ತ ಜ.ತಿಮ್ಮಯ್ಯನವರ ಸ್ವರ ಕೇಳಿ ಬಂದದೆ. ಒಟ್ಟಾರೆ ಹೇಳ್‌ದೂತಾದರೆ ಸೇನೆಗೆ ಸೇರುವವ್‌ಕೆ ಈ ಜಾಗೆ ಖಂಡಿತಾ ಸ್ಫೂರ್ತಿ ಕೊಟ್ಟದೆ.

**ಪ್ರಾಚ್ಯ ವಸ್ತು ಸಂಗ್ರಹಾಲಯ:** ರಾಜ್ಯ ಸರ್ಕಾರದ ಪ್ರಾಚ್ಯ ವಸ್ತು ಇಲಾಖೆನ ಅಧೀನಲಿರ್‌ವ ಹಳೇ ಕಾಲದ ವಸ್ತುಗಳ ಸಂಗ್ರಹ, ನಮ್ಮ ಕೊಡ್‌ಗ್‌ನ ಇತಿಹಾಸನೇ ತಿಳ್‌ಸಿ ಕೊಟ್ಟದೆ. ಇಲ್ಲಿ ಹತ್ಯಾರುಗ, ಬಟ್ಟೆ–ಬರಿಗ, ವೀರಗಲ್ಲುಗ, ಮಾಸ್ತಿಗಲ್ಲುಗ, ಸೇರ್‌ದಂಗೆ ಬಾರೀ ಅಪರೂಪದ ವಸ್ತುಗಳ್‌ನ ನಾವ್ ನೋಡಕ್. ಹಿಂದೆ ರಾಜ ಮಹಾರಾಜರ್‌ಗ, ಸೈನಿಕಂಗ ಉಪಯೋಗಿಸ್‌ತಿದ್ದ ಫಿರಂಗಿಗಳ ಸಂಗ್ರಹ ಒಳಗೆ–ಹೊರಗೆ ಎರ್‌ಡು ಕಡೆಲೂ ಕಂಡದೆ. ಸ್ವತಂತ್ರ ಭಾರತದ ಸುರೂನ ಸೇನಾನಿ, ಭೂಸೇನನ ಸುರೂನ ಮಹಾದಂಡನಾಯಕ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪನವ್‌ಕೆ ಸಿಕ್ಕಿದ ಇನಾಮುಗ, ಪ್ರಶಸ್ತಿಗಳ್‌ನ ಸನ ಇಲ್ಲಿ ಇಸಿಯೊಳೊ.





# ಜಲಪಾತಗಳ ಜೊಂಪೆ ನಮ್ಮ ಕೊಡ್‌ಗ್

ಕೊಡ್‌ಗೂತೇಳ್ರೆ ಸಾಕ್, ಪ್ರಕೃತಿ ಸಿರಿನೊಟ್ಟಿಗೆ ಸೇರಿ ಕೊಣ್‌ಕಂಡಿರುವಂತ ಪೊರ್ಲುನ ಜಲಪಾತಗ ನಮ್ಮ ಕಣ್ಮುಂದೆ ಬಂದವೆ. ಮಳೆಗಾಲಲಂತೂ ಕೇಳ್‌ದೇ ಬೇಡ. ಇದ್ದ ಬದ್ದ ತೋಡು–ತೊರೆಗ ತುಂಬಿ ಜುಳು–ಜುಳೂತ ಸದ್ದ್ ಮಾಡಿಕಂಡ್, ಹಾಲ್‌ನಂಗೆ ಸುರ್‌ದ್ ಕಣ್ಣ್‌ಗಳಿಗೆ ಹಬ್ಬ ಉಂಟ್‌ಮಾಡ್‌ವೆ. ಅವ್‌ಗಳ ಮುಂದೆ ಹೋಗಿ ನಿತ್ತರೆ ಬೇರೆ ಸ್ವರ್ಗನ ನಾವ್ ಹುಡ್‌ಕುದೇ ಬೇಡ ! ಅದಕ್ಕೆ ಕಂಡದೆ ಕವಿ ಹೇಳ್‌ದ್ "ನಡೆದು ನೋಡಾ ಕೊಡಗಿನ ಬೆಡಗಂ"ತ.

ಮಳೆಗಾಲಲಿ ಈ ಜಲಪಾತಗಳ್‌ನ ನೋಡೊಕೂತಾದರೆ ಮಳೆ, ಗಾಳಿ, ಚಳಿನ ಸಯ್ಸಿಕಂಡ್ ಉಂಬುಳ್‌ಂದ ಕಚ್ಚಿಸ್‌ಕಂಡ್ ಹೋಕೆ ಎದೆಗಟ್ಟಿ ಇರೊಕು! ಯಾಕೇತೇಳ್ರೆ ಈ ಜಲಪಾತಗ ಸಾಮಾನ್ಯಾಗಿ ಇರ್‌ದು ದಟ್ಟ ಕಾಡ್‌ಗಳ ನಡೂಲಿ, ಇಲ್ಲೇತಾದ್ರೆ ಯಾರ್‌ದೋ ಕಾಫಿ–ಯಾಲ ತೋಟಗಳ್‌ಲಿ. ಪಶ್ಚಿಮಘಟ್ಟದ ಜಲಪಾತಗಳ ತೌರುಮನೆ ಕೊಡಗ್‌ತ ಹೇಳಕ್. ಮಳೆಗಾಲಲಿ ಹೆಸ್‌ರಿಲ್ಲದ ಬೇಕಷ್ಟ್ ಜಲಪಾತಗ ಸೃಷ್ಟಿಯಾದವೆ. ಹೆಚ್ಚಿನ ಜಲಪಾತಗ ಅಲ್ಪಾಯುಸ್ಸಿಗ. ಮಳೆ ಕಮ್ಮಿ ಆದಂಗೆ ಅವೂ ಮಾಯಾದವೆ. ಈ ಮಳೆಗಾಲದ ಸುಂದರಿಯರ್‌ನ ನಾವ್ ಪರಿಚಯ ಮಾಡಿಕಂಬನೊ.

**ಅಬ್ಬಿ ಜಲಪಾತ:** ಮಡಿಕೇರಿಗೆ ತುಂಬಾ ಹಕ್ಕಲೆ ಅಂದರೆ 8 ಕಿ.ಮೀ. ದೂರಲಿ ಇದ್ ಉಟ್ಟ್, ನೆರವಂಡ ನಾಣಯ್ಯನವರ ಕಾಫಿ–ಯಾಲ ತೋಟದ ನೊಡುಲಿ ಇರ್‌ದು. ದೊಡ್ಡ ದೊಡ್ಡ ಪಾರೆಕಲ್ಲುಗಳ ನಡೂಲಿ ಸುಮಾರ್ 50 ಅಡಿ ಎತ್ತರಂದ ನೀರ್ ಹಾರ್‌ದ್‌ನ ನೋಡಿಕೆ ಎರ್‌ಡ್ ಕಣ್ಣ್‌ಗ ಸಾಲ್ದುಲೆ. ಹಕ್ಕಲೆ ಹೋಗಿ ಜಾರಿಬದ್ದ್ ಜೀವಕೆ ಅಪಾಯ ಆಕಾಗದೂತ ಒಂದ್



ತೂಗುಸೇತುವೆನ ಹೊಳೆಗೆ ಅಡ್ಡ ಮಾಡಿ ಕಟ್ಟ್ಯೊಳೊ. ಬ್ರಿಟಿಷ್‌ನವು ಈ ಜಲಪಾತನ 'ಜೆಸ್ಸಿ ಫಾಲ್ಸ್' ತ ಕರಿತಿದ್ದೊಗಡ.

**ಮಲ್ಲಳ್ಳಿ ಜಲಪಾತ:** ಪುಷ್ಪಗಿರಿ ಪರ್ವತ ಶ್ರೇಣಿಲಿರುವಂತ ಈ ಜಲಪಾತ ಕೊಡಗ್‌ನ ಜಲಪಾತಗಳ್‌ಲೇ ಬಾರೀ ದೊಡ್ಡದ್. ಎರ್‌ಡ್ ಬೆಟ್ಟಗಳ ಮದ್ಯೆ ಸುಮಾರು 80 ಅಡಿ ಅಗಲಾಗಿ, 200 ಅಡಿ ಎತ್ತರಂದ ಬೀಳ್‌ವಂತ ಇದರ ಘರ್ಜನೆನ ನೋಡ್‌ದೇ ಒಂದ್ ಕುಸೀನ ವಿಚಾರ. ದೊಡ್ಡ ಕಾಡ್‌ನ ನೊಡುಲಿ ಇರ್‌ವಂತ ಮಲ್ಲಳ್ಳಿ ಜಲಪಾತನ ನೋಡೊಕೂತಾದರೆ ನಾವ್ ಕಾಲ್ನಡಿಗೆಲೇ ಹೋಕಾದೆ. ಕುಮಾರಧಾರ ಹೊಳೆ ಇದ್‌ರ ಮೂಲ. ಸೋಮವಾರಪೇಟೆಂದ 28 ಕಿ.ಮೀ. ದೂರಲಿ ಇದ್ ಉಟ್ಟ್.

**ಚೇಲಾವರ ಜಲಪಾತ:** ಮಡಿಕೇರಿನ ನಾಪೋಕ್ಲಿಂದ 16 ಕಿ.ಮೀ.ಗಳಷ್ಟ್ ಅಥವಾ ವಿರಾಜಪೇಟೆನ ಚೆಯ್ಯಂಡಾಣೆಂದ 2 ಕಿ.ಮೀ. ದೂರಲಿರ್‌ದ್ ಈ ಜಲಪಾತ. ಚೇಲಾವರ ತೇಳ್ವ ಗ್ರಾಮದ ಹೆಸ್‌ರ್‌ಲೇ ಇರ್‌ವ ಇಲ್ಲಿ ಬಾರೀ ಪೊರ್ಲುನ ಎರ್‌ಡ್ ಜಲಪಾತಗಳ್‌ನ ನಾವ್ ನೋಡಕ್. ಚೋಮನ ಕುಂದ್‌ಂದ ಬಾವಂತ ಸೋಮನ ಹೊಳೆ ಮತ್ತೆ ತಡಿಯಂಡಮೋಳ್ ಬೆಟ್ಟಂದ ಬಾವಂತ ಬಲಿಯಟ್ರ ಹೊಳೆಂದಾಗಿ ಈ ಚೇಲಾವರ ಜಲಪಾತಗಳ ಸೃಷ್ಟಿಯಾವ್‌ಟ್. ಇದ್ ಸನ ಒಂದ್ ತೋಟದೊಳಗೆ ಇರ್‌ದು. ಬಲಿಯಟ್ರ ಹೊಳೆಂದ ಆದಂತ ಜಲಪಾತ ಸುಮಾರು 100 ಅಡಿಗಳಷ್ಟ್ ಎತ್ತರಲಿ ಮತ್ತೆ 80 ಅಡಿಗಳಷ್ಟ್ ಅಗಲಲಿ ಉಟ್ಟ್. ಸೋಮನ ಹೊಳೆಂದ ಆದಂತ ಜಲಪಾತ 50 ಅಡಿಗಳಷ್ಟ್ ಎತ್ತರಂದ 3 ಹಂತಗಳ್‌ಲಿ ಧುಮುಕಿದೆ. ಒಂದ್ ಲೆಕ್ಕಲಿ ಇವ್ ಪ್ರಶಾಂತ ಜಲಪಾತಗಾತ ಹೇಳಕ್.



**ಇರ್ಪು ಜಲಪಾತ:** ಬ್ರಹ್ಮಗಿರಿ ತಪ್ಪಲ್‌ಲಿ ಇರುವಂತ ಈ ಜಲಪಾತನ ನೋಡ್ರೆ ಯಾರೂ ನೀರಿಗಿಳಿಯದಿರ್‌ಕಿಲೆ. ಇದನ 'ಲಕ್ಷ್ಮಣ ತೀರ್ಥ'ತನೂ ಕರ್‌ದವೆ. ವಿರಾಜಪೇಟೆ ತಾಲೂಕ್‌ಲಿರುವ ಶ್ರೀಮಂಗಲ–ಕುಟ್ಟ ರಸ್ತೆಲಿ ಹೋದರೆ ಈ ಜಲಪಾತನ ನೋಡಕ್. ಇರ್ಪು ರಾಮೇಶ್ವರ ದೇವಸ್ಥಾನಂದ ಮುಕ್ಕಾಲು ಕಿ.ಮೀ. ದೂರಲಿರುವ ಇದರ ಪೊರ್ಲುನ ನೋಡಿಯೇ ಸವಿಯೊಕು. ಎರಡು ಹಂತಗಳ್‌ಲಿ ಧುಮುಕುವ ಈ ಜಲಪಾತ 75 ಅಡಿಗಳಷ್ಟ್ ಎತ್ತರಂದ ಧುಮುಕಿ ಮತ್ತೆ ಸಣ್ಣ ಸಣ್ಣದಾಗಿ ಸಿಡಿಯುವಂತ ದೃಶ್ಯ ಬಾರೀ ಲಾಯ್‌ಕ. ಈ ಜಲಪಾತದ ವಿಸೇಸತ ಹೇಳ್‌ರೆ ಅಲ್ಲಿ ಮೆಟ್ಲುಗಳ ವ್ಯವಸ್ಥೆನೂ ಮಾಡಿ ಇಟ್ಟೊಳೊ. ಹಂಗಾಗಿ ಬಾರೀ ಹಕ್ಕಲೆಂದ ಹೋಗಿ ನೋಡಿಕೆ ತೊಂದರೆ ಇಲ್ಲೆ. ಈ ನೀರ್‌ಲಿ ಮೀದರೆ ಅದ್‌ರ್‌ಲೂ ಮಹಾಶಿವರಾತ್ರಿನಂದು ಹೋಗಿ ಮೀದರೆ ಮಾಡ್‌ದ ಪಾಪಗ ಎಲ್ಲಾ ಪರಿಹಾರ ಆದೇಂತೇಳ್‌ದು ಜನ್‌ರ ನಂಬಿಕೆ. ಇರ್ಪುಗೆ ಶ್ರೀರಾಮಚಂದ್ರ ತನ್ನ ಹೆಣ್ಣ್ ಸೀತೆ ಮತ್ತೆ ತಮ್ಮ ಲಕ್ಷ್ಮಣನೊಟ್ಟಿಗೆ ಬಂದಿತ್ತ್‌ಗಡ.

**ಮಾದಂಡ ಅಬ್ಬಿ ಜಲಪಾತ:** ನಾಪೋಕ್ಲು ಹಕ್ಕಲೆ ಇರ್‌ವ ಕಕ್ಕಬ್ಬೆಯ ಯವಕಪಾಡಿಗೆ ಹೋಗಿ ಅಲ್ಲಿರ್‌ವ ನಾಲ್ಕು ನಾಡ್ ಅರಮನೆ ಎದ್‌ರ್‌ಗಿರ್‌ವ ರಸ್ತೆಲಿ ನಿತ್ತ್ ನೋಡ್‌ರೆ ಅಲ್ಲೊಂದು ಮನೆ ಹಕ್ಕಲೆ ಜಲಪಾತ ಸದ್ದ್ ಮಾಡ್‌ದೆ. ಅದೇ ರಸ್ತೆಲಿ ಮುಂದೆ ಹೋದರೆ ಸುಮಾರು 4 ಕಿ.ಮೀ. ದೂರಲಿ ದಟ್ಟ ಕಾಡ್‌ನ ನಡೂಲಿ ಕಣಿವೆಂದ ಧುಮುಕುವ ಈ ಜಲಪಾತ ಸುಮಾರು 150 ಅಡಿ ಎತ್ತರಂದ ಬಿದ್ದದೆ.

ಈ ಮಾದಂಡ ಅಬ್ಬಿ ಜಲಪಾತದ ಪೊರ್ಲುನ ನೋಡಿಕೆ ಇನ್ನೂ ಸ್ವಲ್ಪ ದೂರ ಬೆಟ್ಟ ಹತ್ತಿ ನಡಿಯೊಕಾದೆ. ಅಲ್ಲಿಂದ ನೋಡ್‌ಕನ ಬೆಟ್ಟದ ಮೇಲೆ ಮಿಂಚು ಹೊಡ್‌ದಂಗೆ ಕಾಂಬಂತ ಈ ಜಲಪಾತದ ಪೊರ್ಲುನ ಸಬ್ದಗಳ್‌ಲಿ ವರ್ಣಿಸಿಕಾಲೆ!

**ನೀಲಕಂಡಿ ಜಲಪಾತ :** ಕಕ್ಕಬ್ಬೆ ಹಕ್ಕಲೆ ಇರ್‌ವಂತ ಕಬ್ಬನ ಕಾಡ್‌ಗೆ ಹೋಗಿ ಅಲ್ಲಿಂದ ಬಲ್‌ದ ಭಾಗಲಿ ಮಣ್ಣ್ ರಸ್ತೆಲೇ ಹತ್ತ್‌ತಾ ಹೋದರೆ 4 ಕಿ.ಮೀ. ದೂರಲಿ ಒಂದ್ ಅಪ್ಪಾರಂಡ ಮನೆ ಕಂಡದೆ. ಅಲ್ಲಿಂದ 3 ಕಿ.ಮೀ ದೂರಲಿ ಹಂಗೇ ಹತ್ತಿಕಂಡ್ ಹೋಕನ ಬೆಟ್ಟಸಾಲ್‌ಗಳ ನೊಡುಲಿ ಇರ್‌ವಂತ ಈ ಜಲಪಾತ 'ಪಾತಿ' ತೇಳ್ವ ಹೊಳೆಂದ ಆದ್‌ಗಡ. ಇದ್ ಸುಮಾರ್ 200 ಅಡಿಗಳಷ್ಟ್ ಎತ್ತರಂದ ಬಿದ್ದದೆ. ಇದ್‌ನ ನಾವ್‌ಗಿಂತ ಜಾಸ್ತಿ ಹೊರದೇಸದವು ಬಂದ್ ನೋಡಿ ಕುಸಿ ಪಟ್ಟ್ ಹೋದೇ ಜಾಸ್ತಿ.

**ತಣ್ಣೆಮಾನಿ ಪಾರೆಕಟ್ಟಿ ಜಲಪಾತ :** ಇದ್‌ಕೆ 'ಅಲ್ಪಾಯುಷಿ' ಜಲಪಾತತನೂ ಹೇಳ್‌ವೆ. ಸುಮಾರು 80 ಅಡಿಗಳಷ್ಟು ಎತ್ತರಂದ ಧುಮುಕುವ ಈ ಜಲಪಾತದ ಆರ್ಭಟ ಬರೀ ಮಳೆಗಾಲಲಿ ಮಾತ್ರ ! ಭಾಗಮಂಡಲ ಸರ್ಕಾರಿ ಆಸ್ಪತ್ರೆನ ಹಿಂದೆ ಇರ್‌ವಂತ ರಸ್ತೆಲಿ 3 ಕಿ.ಮೀ. ಹೋದರೆ ಇದ್ ಸಿಕ್ಕಿದೆ. ಮಳೆಗಾಲಲಿ ಮಾತ್ರ ಈ ಜಲಪಾತದ ಸದ್ದ್ ಕೇಳ್‌ದೆ.

**ಬಾಚಿಮಲೆ ಅಬ್ಬಿ ಜಲಪಾತ:** ಇದ್ ಭಾಗಮಂಡಲ ಕರಿಕೆ ನೊಡುಲಿ 60 ಅಡಿಗಳಷ್ಟ್ ಎತ್ತರಂದ ಹಾರ್‌ದೆ. ಈ ಜಲಪಾತ ರಸ್ತೆ ಬದಿಲೇ ಇರ್‌ದಕೆ ಆಚೆ ಈಚೆ ದಾಟ್‌ಕನ ನಾವ್ ಕಣ್ತುಂಬಾ ನೋಡಕ್. ಇದೇ ದಾರಿಲಿ ಸುಮಾರ್ 11 ಕ್ಕೂ ಹೆಚ್ಚ್ ಅಲ್ಪಾಯುಷಿ ಜಲಪಾತಗಳ್‌ನ ನಾವ್ ನೋಡಕ್.

**ದಾಸನ ಕಾಡು ಜಲಪಾತ:** ಭಾಗಮಂಡಲದ ಹಕ್ಕಲೆ ಇರುವಂತ ಚೆಟ್ಟಿಮಾನಿ ರಸ್ತೆಲಿ 3 ಕಿ.ಮೀ. ಹೋದರೆ ದೂರಂದನೇ ಇದ್‌ರ ಬೊಬ್ಬೆ ಕೇಳ್‌ದೆ. 30 ಅಡಿಗಳ್‌ಗೂ ಹೆಚ್ಚ್‌ನ ಎತ್ತರಂದ ಇದ್ ಬಿದ್ದದೆ.

**ಕೋಟೆ ಅಬ್ಬಿ ಜಲಪಾತ:** ಮಡಿಕೇರಿಂದ ಸುಮಾರು 23ಕಿ.ಮೀ.ಗಳಷ್ಟ್ ದೂರಲಿ ಮಾಂದಲ್‌ಪಟ್ಟಿತೇಳ್ವ ನಿಸರ್ಗದ ಪೊರ್ಲುನೆಲ್ಲಾ ಮಟ್ಟೆಲಿ ಇಟ್ಟ್‌ಕಂಡಿರುವ ಜಾಗೆ ಉಟ್ಟ್. ಅಲ್ಲಿಂದ 5 ಕಿ.ಮೀ. ದೂರಲಿರ್‌ದೇ **'ಕೋಟೆ** ಅಬ್ಬಿ ಜಲಪಾತ**'**. ಇದ್‌ರ ಬಗ್ಗೆ ಹೆಚ್ಚಿನವ್‌ಕೆ ಗೊತ್ತಿಲ್ಲೆ. ಇಲ್ಲಿಗೆ ಹೋಕೂತಾದರೆ ಯಾವ್‌ದೇ ರೀತಿನ ಬಸ್ ವ್ಯವಸ್ಥೆ ಇಲ್ಲೆ. ಬಾಡಿಗೆ ಜೀಪುಲಿ ಅಂಕು–ಡೊಂಕುನ ದಾರಿಲಿ ಧಡ್–ಧಡ್ ತ ಹಾರಿಕಂಡ್ ಹೋಗ್‌ವ ಜೀಪ್‌ಲಿ ಕುದ್ದ್ ಹೋಗ್‌ವ ಮಜಾನೇ ಬೇರೆ! ಇಲ್ಲಿ ಬೆಟ್ಟಲಿರುವ ತೋಟಲಿ ಪಾರೆಕಲ್ಲ್‌ಗಳ ನೊಡುಂದ 80 ಅಡಿಗಳಷ್ಟ್ ಮೇಲೆಂದ ಬಿದ್ದ್ ಹರ್‌ಕಂಡ್ ಬಾವ ಈ 'ಕೋಟೆ ಅಬ್ಬಿ' ಬಾರೀ ಪೊರ್ಲು. ನೀರ್‌ಲಿ ಆಡಿಕೆ ಹೇಳಿ ಮಾಡ್‌ಸಿದ ಜಾಗೆ ಇದ್. ಕೋಟೆ ಬೆಟ್ಟಂದ ಸ್ವತ: ಈಶ್ವರನೇ ಇಲ್ಲಿಗೆ ಬಂದ್ ಮೀದ್ ಹೋದೇತ ಸ್ಥಳೀಯರು ನಂಬುವೆ.

**ಬೊಳ್‌ಗಲ್ಲ್ ಮೊಟ್ಟೆ ಜಲಪಾತ:** ದಾಸನ ಕಾಡು ಜಲಪಾತಂದ ಒಂದೂವರೆ ಕಿ.ಮೀ. ದೂರ ನಡ್‌ದರೆ ಈ ಜಲಪಾತನೂ ನೋಡಕ್. ಸುಮಾರು 25 ಅಡಿಗಳಷ್ಟ್ ಎತ್ತರಂದ ಬೀಳ್‌ವ ಇದ್ 2 ಹಂತಗಳ್‌ಲಿ ಧುಮುಕಿದೆ.

**ಸೂರ್ಲಬಿ ಮತ್ತೆ ಗರ್ವಾಲೆ ಜಲಪಾತಗ:** ಬಾರೀ ಪೊರ್ಲ್‌ನ ಈ ಜಲಪಾತಗಳ್‌ನ ನೋಡಿಕೆ ಕಾಡೊಳಗೆ ನಡ್‌ಕಂಡೇ ಹೋಕಾದೆ. ನಡ್‌ಕಂಡ್ ಹೋದ ಸುಸ್ತ್ ಈ ಜಲಪಾತಗಳ್‌ನ ನೋಡ್‌ಕನ ಖಂಡಿತಾ ಪರಿಹಾರ ಆದೆ. ಇಂತ ಸುಮಾರ್ ಜಲಪಾತಗ ಮಡಿಕೇರಿಂದ ಸೋಮವಾರಪೇಟೆ ರಸ್ತೆಲಿ ನಾವ್‌ಗೆ ಕಂಡವೆ.

**ಮುಕ್ಕೋಡ್ಲು ಜಲಪಾತ:** ಮಡಿಕೇರಿ ಸೋಮವಾರಪೇಟೆ ನೊಡುಲಿ ಸಿಕ್ಕುವಂತ ಹಟ್ಟಿ ಹೊಳೆಗೆ ಹೋಗಿ, ಅಲ್ಲಿಂದ 8ಕಿ.ಮೀ. ದೂರ ಹೋದರೆ ಈ ಜಲಪಾತನ ನಾವು

ನೋಡಕ್. ಸುಮಾರು 80 ಅಡಿಗಳಷ್ಟ್ ಎತ್ತರಂದ 10 ಅಡಿಗಳಷ್ಟ್ ಅಗಲಾಗಿ ಬೀಳ್‌ವ ಈ ನೀರ್‌ನ ರಾಸಿನ ನೋಡ್‌ದೇ ಭಾಗ್ಯ. ಇದ್‌ರ ಸುತ್ತ ಮುತ್ತೆಲ್ಲಾ ಬೆಟ್ಟಗ, ಗದ್ದೆಗ, ಕಾಫಿ-ಯಾಲ ತೋಟಗ ಇದ್ದ್ ಜಲಪಾತದ ಪೊರ್ಲು ಇನ್ನೂ ಜಾಸ್ತಿಯಾವ್‌ಟು.

**ಮೇದುರ ಅಬ್ಬಿ ಜಲಪಾತ:** ಮುಕ್ಕೋಡ್ಲು ಜಲಪಾತದ ಹಕ್ಕಲೆ ಇರ್‌ವಂತ ಈ ಜಲಪಾತ ಮಾದಾಪುರ ಗರ್ವಾಲೆಂದ 3 ಕಿ.ಮೀ. ದೂರಲುಟ್ಟು. ಕಾಡ್‌ನ ನೊಡುಲಿ ಬೀಳ್‌ವ ಸುಮಾರು 150 ಅಡಿ ಎತ್ತರದ ಜಲಪಾತ ಇದ್. ಬೊಬ್ಬೆ ಮಳೆಗಾಲಲಿ ಜೋರಾಗಿದ್ದರೂ ಸನ ಬೇಸಿಗೆ ಬಾಕನ ಸೊರ್‌ಗಿ ಹೋದೆ.

**ಅಬ್ಬಿಮಠ ಬಾಚಳ್ಳಿ ಜಲಪಾತ:** ಸೋಮವಾರಪೇಟೆನ ಶಾಂತಳ್ಳಿ ರಸ್ತೆಲಿ ಸುಮಾರು 6 ಕಿ.ಮೀ. ದೂರ ಹೋದರೆ ಬಾಚಳ್ಳಿ ತೇಳ್ವ ಒಂದ್ ಹಳ್ಳಿ ಸಿಕ್ಕಿದೆ. ಅಲ್ಲಿಂದ ಎಡ್‌ದಭಾಗಲಿ 1 ಕಿ.ಮೀ. ಹೋಕನ ಕಾಂಬಂತ ಈ ಜಲಪಾತ ಸುಮಾರು 50 ಅಡಿಗಳಷ್ಟ್ ಎತ್ತರ ಉಟ್ಟ್.

**ಉಂಬುಳ ಗುಂಡಿ ಜಲಪಾತ:** ಮಡಿಕೇರಿ ಮಂಗಳೂರು ರಸ್ತೆಲಿ ಮದೆನಾಡ್ ದಾಟಿ ಹೋಕನ ಜೋಡುಪಾಲ ಸಿಕ್ಕಿದೆ. ಇದ್ ಕಾಫಿ-ಯಾಲ ತೋಟಗಳ ನೊಡುಲಿದ್ದ್ ಸುತ್ತ ಮುತ್ತ ಇರ್‌ವಂತ ಬೆಟ್ಟಗಳ ನೊಡುಂದ ಹರ್‌ಕಂಡ್ ಬಾವ ನೀರ್‌ಗೆಲ್ಲಾ ಒಟ್ಟಿಗೆ ಸೇರಿ ಈ 'ಉಂಬುಳ ಗುಂಡಿ' ಜಲಪಾತನ ಸೃಷ್ಟಿ ಮಾಡ್ಯೊಳೊ.

**ಕೊಯ್‌ನಾಡ್ ಜಲಪಾತ:** ಮಡಿಕೇರಿಂದ ಸುಮಾರ್ 18 ಕಿ.ಮೀ. ದೂರಲಿರುವ ಈ ಜಲಪಾತ ಸುಮಾರ್ 75 ಅಡಿಗಳಷ್ಟ್ ಎತ್ತರಂದ ಕಣಿವೆಯಾಕಾರಲಿ ನಾವ್‌ಗೆ ಕಂಡದೆ, ಕೊಯ್‌ನಾಡ್‌ಲಿ ರಸ್ತೆ ಬದಿಲೇ ಕಾಂಬಕೆ ಮಳೆಗಾಲಲಿ ಸಿಕ್ಕಿರೂ, ಬೇಸಿಗೆ ಬಂದಂಗೆ ಇದ್ ಸಪೂರಾದೆ.

ಇದೇ ರಸ್ತೆಲಿ ಮುಂದೆ ಹೋದರೆ ಅಂದರೆ ಮಡಿಕೇರಿಂದ 23 ಕಿ.ಮೀ. ದೂರಲಿ ಒಂದು ಸೇತುವೆ ಸಿಕ್ಕಿದೆ. ಇದ್‌ರ ಹಕ್ಕಲೆ ಎಡ್‌ದ ಭಾಗಲಿ ಮಣ್ಣ್‌ನ ರಸ್ತೆಲೇ 5 ಕಿ.ಮೀ. ದೂರ ಹೋಕನ ಈ ಜಲಪಾತ ಕಂಡದೆ. ಬೇರೆ ಬೇರೆ ಹಂತಲಿ ಸುಮಾರು 150 ಅಡಿಗಳಷ್ಟ್ ಎತ್ತರಂದ ಧುಮುಕಿ ಈ ಜಲಪಾತ ಸಣ್ಣ ಸಣ್ಣ ಜಲಪಾತಗಳಾಗಿ ಇಳ್‌ದ್ ತಳ ಸೇರ್‌ದೆ.

**ಅರೆಕ್ಕಾನ/ಲೈನ್ಕಜೆ ಜಲಪಾತ:** ಮಡಿಕೇರಿಂದ ಮಂಗಳೂರ್ ಕಡೆ ಹೋಕನ ಸಂಪಾಜೆ ಹಕ್ಕಲೆ ಸಿಕ್ಕ್‌ವ ಜಲಪಾತ ಇದ್. ಕಾಡ್‌ನ ಹಸ್‌ರ್‌ನ ನೊಡುಲಿ ಇದ್ ಹರ್‌ಕಂಡ್ ಹೋದೆ. 'ಟ್ರೆಕಿಂಗ್' ಮಾಡಿಕಂಡ್ ಹೋಗಿ ಈ ಜಲಪಾತನ ನೋಡಿಕಂಡ್ ಬಂದರೆ ಬೊದ್ಕುನುದ್ದಕೂ ಆ ಅನುಭವನ ಮರಿಯಕಾಕಿಲೆ. ಇದ್‌ನ ನೋಡಿಕೆ ಸಂಪಾಜೆ ಚೆಕ್ ಪೋಸ್ಟ್‌ನ ಹಕ್ಕಲೆ ಇರ್‌ವ ಸಂಪಾಜೆ ಸೊಸೈಟಿನತ್ರ ಎಡಕೆ ಹೋಗಿ 6 ಕಿ.ಮೀ. ಚಾರಣ ಮಾಡಿರೆ ಮಾತ್ರ ಈ ಜಲಪಾತನ ನೋಡಕ್.

ಅಟ್ರಿ

**ದೇವರ ಗುಂಡಿ ಜಲಪಾತ:** ಇದ್ ನಾಪೋಕ್ಲು–ಭಾಗಮಂಡಲ ದಾರಿಲಿ ಬಲ್ಲಮಾವಟಿ ಗ್ರಾಮದ ಹಕ್ಕಲೆ ಉಟ್ಟ್. ಪೆರೂರಿನ ದಾರಿಲಿ ಮುಖ್ಯ ರಸ್ತೆನ ಬುಟ್ಟು ಎಡಕೆ ಹೋದರೆ ಇದ್ ಸಿಕ್ಕಿದೆ. ಸುಮಾರು 60 ಅಡಿ ಎತ್ತರಂದ ಹಾರಿ ಅಗಲದ ಕೆರೆಯೊಳಗೆ ಬಿದ್ದ್ ಚಿಮ್ಮುದ್‌ನ ನೋಡುವ ಅನುಭವಕೆ ಸರಿಸಾಟಿ ಬೇರೆ ಯಾವ್‌ದೂ ಇರಿಕಿಲೆ.

ಇನ್ನೂ ಹಿಂಗೆ ಎಷ್ಟೆಷ್ಟ್ ಜಲಪಾತಗ ಎಲ್ಲೆಲ್ಲಿ ತೆರೆಮರೆಲಿ ಕುದ್ದುಳೊನೋ ಯಾರಿಗೆ ಗೊತ್ತ್ !





# ಕೊಡ್‌ಗ್‌ನ ಮಳೆಗಾಲದ ತೀನಿಗ

ಮಳೆಗಾಲಾತೇಳ್‌ದು ಕೊಡ್‌ಗ್‌ನ ಸಂಸ್ಕೃತಿನ ಒಂದ್ ಭಾಗನೇ ಆಗಿ ಹೋವುಟ್ಟ್. ಯಾಕೇತೇಳ್‌ರೆ ವರ್ಷದ ಅರ್ಧದಷ್ಟ್ ಭಾಗನ ಇಲ್ಲಿನ ಜನ ಮಳೆಲೇ ಕಳೀತಿದ್ದೊ. ಆ ಜಡಿ ಮಳೆಲಿ ಕಾಫಿ ಕೆಲ್‌ಸ, ಗದ್ದೆ ಕೆಲ್‌ಸದ ಭರಾಟೆ ಜೋರಾಗಿತ್ತ್. ಆರೋಗ್ಯದ ದೃಷ್ಟಿಲಿ ಆ ಸಮಯಲಿ ಮಳೆಗಾಲಕೆ ಸರಿಯಾಗಿ ಸಿಗ್‌ತಿದ್ದ ತೀನಿಗಳ್‌ನ ತಿಂದ್‌ಕಂಡ್, ತೋಟ ಕೆಲ್‌ಸನೂ ಮಾಡಿಕಂಡ್ ಗಟ್ಟಿಮುಟ್ಟಾಗಿ ಇರ್‌ತಿದ್ದೊ.

ಮಳೆಗಾಲಲಿ ನಮ್ಮ ತಡಿನ ಉಷ್ಣತೆನ ಹೆಚ್ಚ್‌ಮಾಡ್‌ವಂತ ತೀನಿಗಳ್‌ನ ಜಾಸ್ತಿ ಉಪಯೋಗಿಸ್‌ತಿದ್ದೊ. ಮಳೆಗಾಲತೇಳ್ರೆ ಸುರೂಲಿ ನಾವ್‌ಗೆ ಗ್ಯಾನ ಬಾದು ಕೊಡ್‌ಗಿನವು ಚಪ್ಪರ್‌ಸಿಕಂಡ್ ಅಕ್ಕಿರೊಟ್ಟಿನೊಟ್ಟಿಗೆ ತಿಂಬಂತ "ಕಣಲೆ". ಹೊಳೆಕರೆ, ಹಳ್ಳ ತೋಡು, ಕಾಡ್–ಮೇಡ್‌ಗೆಲ್ಲಾ ನುಗ್ಗಿ ಕಣಲೆನ ಕಡ್‌ದ್ ತಂದ್, ತೊಪ್ಪೆನ ಚೊಲ್ಲಿ ಎಳೆಬಿದ್‌ರ್‌ನ ತೆಳ್ಳನೆ ಕೊಯ್‌ದ್ ನೀರಲಿ ನೆನೆಹಾಕೊಕು. ದಿನೋಳೂ ನೀರ್‌ನ ಚೆಲ್ಲಿ ಹೊಸ್‌ದಾಗಿ ಹಾಕೊಕು. ಯಾಕೇತೇಳ್ರೆ ಸುರೂನ ದಿನದ ನೀರ್‌ಲಂತೂ ವಿಸದ ಅಂಸನೇ ಇದ್ದದೆಗಡ. ಹಿಂಗೆ ಮೂರು ದಿನ ನೀರ್‌ನ ಬದ್‌ಲಾಯಿಸಿದ ಮೇಲೆ, ನೀರ್ ಹಾಕಿಟ್ಟ್ ಮರ್‌ದಿನ ಅದೇ ನೀರ್‌ನೊಟ್ಟಿಗೆ ಕಣಲೆನ ಬೇಸಿ ಗೈಪು ಮಾಡ್‌ರೆ ಬಾರೀ ರುಚಿ. ತೆಂಗಿನ ಕಾಯಿ ಹಾಕಿ ಗೈಪು ಮಾಡ್‌ರೂ ಆದೆ, ನೆನೆಸಿಟ್ಟ ದೊಡ್ಡ ಕಡ್‌ಲೆ, ಹೊರ್‌ದ ಚೆಟ್ಟ್‌ಕಾಳ್, ಕುಟ್ಟಿದ ಹಲ್‌ಸ್‌ನಕ್ಕಿ ಬೆರ್‌ಕೆ ಮಾಡಿ ಗೈಪು ಮಾಡ್‌ರೂ ಲಾಯ್‌ಕನೇ. ಕಣಲೆ ಪಲ್ಯನೂ ಮಾಡಕ್, ಉಪ್ಪಿನ ಕಾಯಿನೂ ಹಾಕಕ್. ಉಪ್ಪ್‌ಲಿ ಹಾಕಿಸಿರೆ ವರ್ಸ ಇಡೀ ಬೇಕಾಕನ ಸಾರು ಮಾಡಿಕಣಕ್. ಬಿದಿರ್‌ನ ಕಣಲೆ, ವಾಟೆ ಕಣಲೇತ ಎರಡು ತರದ ಕಣಲೆಗ ಸಿಕ್ಕಿರೂ

ಸನ ಬಿದಿರ್‌ನ ಕಣಲೆದ್ ರುಚಿನೇ ಬೇರೆ! ಕೊಡ್‌ಗ್‌ನ ವಿಸೇಸ ತೀನಿಯಾದ ಇದ್ ಇಲ್ಲಿನ ಜಂಬಾರಗಳ್‌ಲಿ ಬೇರೆ ಬೇರೆ ರೂಪಲಿ ಕಾಣ್‌ಸಿಕಂಡದೆ.

ಇನ್ನ್ ನಾವ್‌ಗೆ ಗ್ಯಾನ ಬಾದು ರುಚಿ-ರುಚಿ ಅಳುಂಬುಗ, ಬೆಳಿಯಾಗಿ ಇರ್‌ವ ಬೆಳಂಜರಿ ಅಳುಂಬು, ಹೆಗ್ಲ್ ಅಳುಂಬು, ಬೇರ್ ಅಳುಂಬು, ನಾಯ್‌ಮರಿ ಅಳುಂಬು, ಮರ ಅಳುಂಬು, ಕೊಕ್ಕಲೆ ಅಳುಂಬು, ದರ್‌ಗ್ ಅಳುಂಬು, ಸುಳಿರ್ ಅಳುಂಬು, ನುಚ್ಚ್ ಅಳುಂಬು ಹಿಂಗೆ ಎಷ್ಟೋ ಬಗೆನ ಅಳುಂಬುಗ ನಮ್ಮ ಸುತ್ತಮುತ್ತಲಿ ಸಿಕ್ಕಿದೆ. ಕೃತಕ ಬೇಸಾಯಲಿ ಕೂಡಾ ಇದ್‌ನ ಬೆಳ್‌ದ್ ಮಾರಿ ಲಾಭ ಪಡ್‌ದವೆ. ಒಂದೊಂದಕ್ಕೆ ಒಂದೊಂದ್ ರುಚಿ. ಬರೀ ಉಪ್ಪ್ ಮೆಣ್‌ಸ್ ಬಿದ್ದರೂ ಸಾಕ್, ಇದ್‌ನ ಚಪ್ಪರಿಸಿಕೊಂಡ್ ತಿನ್ನಕ್. ತಿಂಬಕೆ ಮೊದ್‌ಲ್ ಅದರ್‌ಲೇನಾದರೂ ವಿಸದ ಅಂಸ ಇದ್ದರೆ ನಾಸ ಆಗಲೀತ ಕಬ್ಬಿಣನ ಲಾಯ್‌ಕಲಿ ಕಾಸಿ ಗೈಪುಗೆ ಮುಳ್‌ಗಿಸಿಟ್ಟವೆ.

ಜುಲೈ ತಿಂಗಳ್‌ಲಿ ಬಾವ ಆಟಿ ತಿಂಗಳ 18 ನೇ ದಿನ ಸಿಕ್ಕುವಂತ ಆಟಿಸೊಪ್ಪುನ ಮೊದ್ದ್‌ನ ಗುಣದ ಬಗ್ಗೆ ಎಲ್ಲವುಕೂ ಗೊತ್ತ್‌ಟ್. 18 ತರದ ಮೊದ್ದ್‌ಗಳಿಂದ ಕೂಡಿರ್‌ವ ಈ ಆಟಿಸೊಪ್ಪುನ ತೊಳ್ದು, ಲಾಯ್‌ಕಲಿ ನೀರಿಟ್ಟ್ ಬೇಸಿ, ಇರ್ಲ್ ಪೂರ್ತಿ ಆ ನೀರ್‌ನ ಹಂಗೇ ಇಸಿದ ಮೇಲೆ, ಹೊತಾರೆದ್ದಂಗೆ ಆ ನೀರ್‌ಲೇ ಮಾಡ್‌ದ ಅಕ್ಕಿ ಪಾಯಸನ ಉಂಬೊದ್ ಆಟಿಲಿ ವಿಸೇಸ. ತಿಂಬಕನ ಪಾಯ್‌ಸಕೆ ಜೇನುತುಪ್ಪ ಹಾಕಿ ತಿಂದರೆ ಬಾರೀ ರುಚಿ ಮತ್ತೆ ಶರ್‌ರದ ಉಷ್ಣತೆ ಹೆಚ್ಚಾಕೂ ಇದ್ ಒಳ್ಳೆದ್. ನೀಲಿ ಬಣ್ಣಲಿರ್‌ನ ಈ ಪಾಯಸಕೆ ಅದರ್‌ದೇ ಆದ ಗಮನ ಇದ್ದದೆ. ಆಶ್ಚರ್ಯಾರ್ತ ಹೇಳ್‌ರೆ ಪಾಯ್‌ಸನ ತಿಂದ ಮೇಲೆ ಒಂದರ್ಧ ಗಂಟೆ ಬುಟ್ಟು ಉಚ್ಚೆ ಹೊಯ್‌ದರೆ ಕೆಂಪು ಬಣ್ಣಲಿದ್ದದೆ. ಯಾವನೋ ಒಬ್ಬ ಆಳ್ ತೋಟದ ಕೆಲ್‌ಸಕೆ ಹೊರ್‌ಗೆಂದ ಬಂದಂವ ಹಿಂಗೆ ಒಮ್ಮೆ ಆಟಿಪಾಯಸನ ತಿಂದ್ ಹೊತಾರೆ ಉಚ್ಚೆ ಹೊಯ್ಯಕನ ಕೆಂಪಾದ್ ಕಂಡ್ ಹೆದ್‌ರಿ ಹುಚ್ಚ್‌ಗಟ್ಟಿ ತಿರ್‌ಗಿ ನೋಡದೆ ಓಡ್‌ದಂವ ವಾಪಾಸ್ ತಿರ್‌ಗಿ ಬಾತಲೆಗಡ ! ಆಟಿ ಸೊಪ್ಪ್‌ನ ನೀರ್‌ಲಿ ರವೆ ಇಲ್ಲರೆ ಅಕ್ಕಿ ಹುಡಿ ಹಾಕಿ ಹಲ್ವನೂ ಮಾಡಿ ತಿಂದವೆ. ಟೀನೂ ಕಾಸಿ ಕುಡ್‌ದವೆ.

ಮರಕೆಸ ಸನ ಆಟಿ ತಿಂಗಳ್‌ಲಿ ಸಿಕ್ಕುವಂತ ಕೆಸ. ಕಾಡ್ ಮರಗಳ ಮೇಲೆ ಕಾಂಬಕೆ ಸಿಕ್‌ವ ಈ ಮರಕೆಸ ಪತ್ರೊಡೆಗೆ ಬಾರೀ ಲಾಯ್‌ಕಾದೆ. ಒಬ್ಬೊಬ್ಬ ಒಂದೊಂತರಲಿ ಪತ್ರೊಡೆ ಮಾಡುವೆ. ಹೆಂಗೆ ಮಾಡ್‌ರೂ ಪತ್ರೊಡೆ ರುಚಿನೇ. ಇದ್‌ರ ದಂಟ್‌ಗೆ ಕಾಳು ಬೆರ್‌ಸಿ ಗೈಪೂ ಮಾಡ್‌ವೆ. ಬೇಸಿ ಪಜ್ಜಿನಂಗೆ ಮಾಡಿಯೂ ತಿಂದವೆ. ಹೊಟ್ಟೆಲಿರ್‌ವ ಕೂದಲ್‌ನ ಹೊರಗೆ ಹಾಕಿಕೆ ಇದ್‌ನ ತಿಂಬೊಂದ್ ಒಳ್ಳೆದ್‌ಗಡ. ವರ್ಸಲೊಮ್ಮೆಯಾದರೂ ಮರಕೆಸನ ತಿನ್ನೊಕೂತ ಹೇಳ್‌ವೆ.

ಬೇಸಿಗೆಲಿ ಒಣ್‌ಗಿಸಿ ಇಸಿದ ಹಲ್‌ಸಿನಕ್ಕಿನ, ಹೊರ್‌ದ್ ತಿಂಬ ಮಜಾನೇ ಬೇರೆ. ಹಲ್‌ಸಿನಕ್ಕಿ - ಒಣ್‌ಗಿಲ್ ಮೀನ್ ಹಾಕಿ ಗೈಪು ಮಾಡಿ, ರೊಟ್ಟಿ

ಜೊತೇಲಿದ್ದರೆ ಹೊರ್‌ಗಡೆ ಎಷ್ಟೇ ಮಳೆ ಬಂದರೂ ಕ್ಯಾರೇ ಇಲ್ಲೆ.

ಇನ್ನ್ ಬೇರೆ ಬೇರೆ ತರದ ಹಸಿ ಸೊಪ್ಪುಗ ಮಳೆಗಾಲಲಿ ಸಿಕ್ಕ್‌ವೆ. ಚರ್‌ಮೆ ಸೊಪ್ಪು, ಚಗ್‌ತೆ ಸೊಪ್ಪು, ಹೊನಗನೆ ಸೊಪ್ಪು, ಗಿಣ್‌ಕೆ ಸೊಪ್ಪು ಎಲ್ಲಾ ಇದ್ದವೆ. ಶರ್‌ರಕೆ, ಕಣ್ಣ್‌ನ ದೃಷ್ಟಿಗೆ ಸನ ಇದ್ ಬಾರೀ ಒಳ್ಳೆದ್.

ಮಳೆಗಾಲಲಿ ನಾವ್‌ಗೆ ಬೇರೆ ಬೇರೆ ತರದ ಎಸ್‌ಂಡ್‌ಗ ಸಿಕ್ಕುವೆ. ಮಳ್ಳಿ ಮೀನ್‌ಗ ಸಿಕ್ಕುವೆ. ಎಸ್‌ಂಡ್‌ನ ಗೈಪುಗಿಂತ ಅದ್‌ನ ಸುಟ್ಟು ತಿಂದರೆ ಬಾರೀ ರುಚಿ. ಈ ಸಮಯಲಿ ಕರುಂಕುರುಂತೇಳ್ವ ತೀನಿಗಳ್‌ಗೆ ಬಾರೀ ಬೇಡಿಕೆ. ಗೇರ್ ಬೀಜ, ಜೋಳ, ಹುಣ್‌ಸೆ ಬೀಜ ಎಲ್ಲನ ಹೊರ್‌ಕಂಡ್, ಸುಟ್ಟ್‌ಕಂಡ್ ಕಟಂಕುಟಂತ ಸದ್ದ್ ಮಾಡರೆ ಮಳೆಗಾಲದ ಚಳಿ ದೂರನೇ! ಎಣ್ಣೆಲಿ ಹೊರಿವಂತ ಬಜ್ಜಿ, ಬೋಂಡಗ ಒಂದ್ ಗಳಿಗೆಲಿ ಖಾಲಿ ಆದವೆ. ಬೇಸಿಗೆಲಿ ಮಾಡಿ ಇಸಿದ ಬೇರೆ ಬೇರೆ ತರದ ಹಪ್ಪಳಗ, ಸಂಡಿಗೆಗ ಈಗ ಡಬ್ಬಿಗಳ್‌ಂದ ಹೊರ್‌ಗೆ ಬಂದವೆ. ಹಲ್‌ಸಿನ ಹಣ್ಣ್‌ನ ಕೂಗೆಲಿಟ್ಟ್ ಮಾಡಿ ತಿಂಬೊದೂ ಈ ಮಳೆಗಾಲಲೇ.

ಎಷ್ಟೋ ವಿಧದ ಕಾಡ್‌ಹಣ್ಣ್‌ಗ ಮಳೆಗಾಲಲಿ ಇದ್ದವೆ. ಕಾಡ್‌ಮಾವಿನ ಹಣ್ಣ್ ಧಾರಾಳ ಸಿಕ್ಕಿದೆ. ತಿಂದ್, ಗೈಪು ಮಾಡಿ, ಜ್ಯೂಸ್ ಮಾಡಿ ಹೆಚ್ಚಾದದನ ನಾವ್ ಉಪ್ಪಲಿ ಹಾಕಿ ಇಸಿಕಂಡವೆ.

ಹಿಂಗೆ ನಮ್ಮಲ್ಲೇ ಸಿಕ್ಕುವಂತ, ಈ ಪ್ರಕೃತಿಲಿ ಪರಮಾತ್ಮ ಕರುಣಿಸಿದಂತ ಎಲ್ಲಾ ತೀನಿಗಳ್‌ನ ಉಪಯೋಗಿಸ್‌ಕಂಡ್ ಕೊಡ್‌ಗಿನ ಜನ ಮಳೆಗಾಲನ ಕುಸೀಲಿ ಕಳ್‌ದವೆ.





# ಬೈಮನ ಮನೆಯೂ – ಬೈತೂರಪ್ಪನೂ

ಗೌಡುಗಳ ಕುಲದೇವ್ರು ವೆಂಕಟರಮಣನೇ ಆದರೂ ಸನ ಅವು ಸಬ್ಬಮ್ಮ, ಕುಟ್ಟದಮ್ಮ, ಮಾರಮ್ಮ, ದುರ್ಗ, ಚಾಮುಂಡಿ, ಭಗವತಿ, ಭದ್ರಕಾಳಿ ಸೇರಿದಂಗೆ ಬೇರೆ ಬೇರೆ ದೈವ ದೇವ್‌ರ್‌ಗಳ್‌ನ, ಶಕ್ತಿದೇವತೆಗಳ್‌ನ ಪೂಜೆಮಾಡಿಕಂಡ್ ಭಕ್ತಿಭಾವಲಿ ನಡ್‌ಕಂಡವೆ. ಹೆಚ್ಚಿನ ಕಡೆ ಇರ್‌ವಂಗೆ ಮೂರ್ತಿಪೂಜೆ ಮಾಡ್‌ವ ಗೌಡ ಜನಾಂಗದವು ವೆಂಕಟ್ರಮಣ, ಗಣಪತಿ, ಸುಬ್ರಹ್ಮಣ್ಯ, ಶಿವ, ಅಯ್ಯಪ್ಪ, ಸತ್ಯನಾರಾಯಣ, ಲಕ್ಷ್ಮಿ–ಸರಸ್ವತಿ ದೇವರ್‌ಗಳ್‌ನ ಪೂಜೆ ಮಾಡ್‌ವೆ.

ಕೇರಳದ ಪೈಯ್ಯಾವೂರ್‌ಲಿರುವ ಬೈತೂರಪ್ಪ ಈಶ್ವರ ದೇವಸ್ಥಾನಕೂ, ಚೇರಂಬಾಣೆ ಹಕ್ಕಲೆ ಇರುವ ಕೊಟ್ಟೂರ್‌ನ ಬೈಮನ ಮನೆಸ್ಥಾನಕೂ ಒಂದ್ ಅವಿನಾಭಾವ ಸಂಬಂಧ ಉಟ್ಟ್. ಕೇರಳದ ಈ ದೇವಸ್ಥಾನಲಿ ಗೌಡ್‌ರ ಬೈಮನ ಮನೆಯವ್‌ಕೆ ವಿಸೇಸ ಮನ್ನಣೆ ಕೊಟ್ಟವೆ. ಪೈಯ್ಯಾವೂರ್‌ನ ಬೈತೂರಪ್ಪನ ಸನ್ನಿಧಿಗೆ ವರ್ಸೋಳ್ ಕೊಟ್ಟೂರ್‌ನ ಬೈಮನ ಐನ್ ಮನೆಂದ ಅಕ್ಕಿ–ಭತ್ತನ ಕಾಣಿಕೆಯಾಗಿ ಕಳ್‌ಸುದು ಸಂಪ್ರದಾಯ. ಸಾಮಾನ್ಯಾಗಿ ಫೆಬ್ರವರಿ 24 ರಂದ್ ಪೈಯ್ಯಾವೂರ್‌ನ ಈಶ್ವರ ದೇವಸ್ಥಾನಲಿ ದೇವರ ಉತ್ಸವ ನಡ್‌ದದೆ. ಇದ್‌ಕೆ ಬೈಮನ ಮನೆಂದ 60 ಹಾನಿಗಳಷ್ಟ್ ಅಂದರೆ ಈಗ 150 ಸೇರ್ ಕೆಂಪಕ್ಕಿ–ಭತ್ತನ 7 ಎತ್ತ್‌ಗಳ್‌ಗೆ ಹೇರಿಕಂಡ್, ಬೈಮನವು ಈಗೊಳೂ ಕಾಲ್ನಡಿಗೆಲೇ ಕಾಡ್–ಮೇಡ್‌ನ ದಾರಿಲಿ, ಬೆಟ್ಟ–ಗುಡ್ಡಗಳ್‌ನ ಹತ್ತಿ ತಕಂಡ್ ಹೋಗಿ ದೇವರಿಗೆ ಒಪ್ಪ್‌ಸಿ ಬಂದವೆ. ಪಂಡ್ ಕಾಲಲಿ 80 ಹಾನಿಗಳಷ್ಟ್ ಅಕ್ಕಿ–ಭತ್ತನ ಕೊಡ್‌ತಿದ್ದೊಗಡ. ಸಂಸಾರ ದೊಡ್ಡದಾದಂಗೆ ಅಷ್ಟ್ ಕೊಡಿಕೆ ಕಷ್ಟ ಆತೂತೇಳಿ ಹಿರಿಯವ್ ಪೈಯ್ಯಾವೂರಿಗೆ ಹೋಗಿ ಬೇಡಿಕಂಡ್, ಅಲ್ಲಿದ್ದ ಕೆರೆನ ಒಂದ್ ಬದಿಗೆ ಕಲ್ಲ್‌ನ ಕಟ್ಟ್‌ಸಿ ಕೊಟ್ಟ್, 60 ಹಾನಿ ಅಕ್ಕಿ–ಭತ್ತ ಒಪ್ಪ್‌ಸುವಂಗೆ ಮಾತಾಡಿಕಂಡ್ ಬಂದೊಗಡ.

ಹಿಂಗೆ 150 ವರ್ಸಗಳ್‌ಗೂ ಮುಂದೆಂದ ನಡ್‌ಕಂಡ್ ಬಂದ ಈ ಸಂಪ್ರದಾಯಕೆ ಅದ್‌ರ್‌ದೇ ಆದ ಇತಿಹಾಸ ಉಟ್ಟ್. ಪಂಡ್‌ಲಿ ಕೇರಳದ ಬೈತೂರಪ್ಪನ ಭಕ್ತಂಗ ಅವ್ವ ಕಾವೇರಿನ ಮೇಲೆ ಭಕ್ತಿಯಿಟ್ಟ್ ದರ್ಶನಕಾಗಿ ಕೊಡಗ್‌ನ ತಲಕಾವೇರಿಗೆ ಬರ್ತಿದ್ದೊ. ಅವ್ ಬಾವ ದಾರಿ ಕಾಡ್‌ಪ್ರಾಣಿಗಳ್‌ಂದ ಕೂಡ್‌ದ ದಟ್ಟ ಕಾಡಾಗಿತ್ತ್. ಈಗಿನಂಗೆ ಕಂಡಲ್ಲಿ ಹೊಟೇಲ್‌ಗ ಬುಡಿ, ಒಂದ್ ಮನೆನೂ ಕಾಂಬಕಿತ್‌ಲೆ. ಒಮ್ಮೆ ಅವ್ ಹಂಗೆ ಬಾಕನ ಇರ್ಲ್ ಆಕಂಡ್ ಬಾತ್. ನಡ್‌ದ್ ನಡ್‌ದ್ ಸುಸ್ತಾಗಿದ್ದ ಅವ್‌ಕೆ ಕೊಳಗದಾಳು ಗ್ರಾಮಲಿ ಒಂದ್ ಬೈಮನ ಮನೆ ಕಂಡತ್. ಬೈಮನ ಮನೆಯವ್ ಆಗ ಗರೀಬ ಸ್ಥಾನಲಿದ್ದೊ ಮತ್ತೆ ಅವ್‌ರ ಜನಸಂಖ್ಯೆನೂ ಬಾರೀ ಕಮ್ಮಿ ಇತ್ತ್. ಹಿಂಗಿದ್ದರೂ ಬೈಮನವು ಬೈತೂರಪ್ಪನ ಭಕ್ತರ್‌ನ ಲಾಯ್‌ಕಲಿ ಮಾತಾಡ್‌ಸಿ, ಉಪಚಾರ ಮಾಡಿ, ಉಳ್‌ಕಣಿಕೆ ವ್ಯವಸ್ಥೆ ಮಾಡ್‌ದೊ. ಅದಲ್ಲದೇ ಅವ್‌ಕೆ ಮನೆಲೇ ಶಿವಪೂಜೆಗೂ ಏರ್ಪಾಡ್ ಮಾಡಿ ಕೊಟ್ಟೊ. ಅಂದ್‌ನ ಇರ್ಲ್ ಸುಧಾರಿಸ್‌ಕಂಡ್ ಹೊತಾರೆ ಎದ್ದ್ ಕಾಡ್‌ದಾರಿಲೇ ತಲಕಾವೇರಿಗೆ ಹೋದೊ. ಅಲ್ಲಿಗೆ ಹೋಗಿ ಪೂಜೆ–ಪುನಸ್ಕಾರ ಮಾಡಿ ಎರಡ್ ದಿನಗ ಅಲ್ಲೇ ಇದ್ದ್ ವಾಪಾಸ್ ಬಾಕನ ಪುನ ಬೈಮನ ಮನೆಗೆ ಬಂದ್, ತಲಕಾವೇರಿಂದ ತಂದ ಪ್ರಸಾದನ ಮನೆಯವ್‌ಕೆ ಕೊಟ್ಟ್, ಪೈಯ್ಯಾವೂರಿಗೆ ಮರ್‌ದಿನ ಹೊರಡ್‌ಕನ 'ಬೈಮನ ಮನೆಯವು ಒಂದಿಬ್ಬರು ನಮ್ಮ ಜೊತೆಲೇ ಬನ್ನಿ ಬೈತೂರಪ್ಪನ ದರ್ಶನ ಮಾಡಿಕಂಡ್ ಬಂದರೆ ನಿಮ್ಮ ಕಷ್ಟಗ ಪರಿಹಾರಾದೆ ಮತ್ತೆ ನಿಮ್ಮ ಕುಟುಂಬನೂ ವೃದ್ಧಿಯಾದೆ" ತ ಹೇಳ್‌ದೊ. ಅದ್‌ರ ಪ್ರಕಾರ ಇಬ್ಬರು ಬೈಮನವು ಅವ್‌ರೊಟ್ಟಿಗೆ ಕೇರಳಕೆ ಹೋದೊ. ಅಲ್ಲಿ ಪೂಜೆ ಮಾಡ್‌ಸಿ, ಪ್ರಸಾದ ತಕಂಡ್ ಹೊರ್‌ಡ್‌ಕನ ಅಲ್ಲಿನ ಭಕ್ತರ್ ಹನಿಯ ಭತ್ತದ ಬಿತ್ತ್‌ನ ಇವರ ಕೈಗೆ ಕೊಟ್ಟ್ " ನೀವ್ ಹೋಗಿ ಈ ಬಿತ್ತ್‌ನ ನಿಮ್ಮ ಗದ್ದೆಲಿ ಬಿತ್ತಿ. ಬೆಳೆ ಬಂದ ಮೇಲೆ ಫಸಲ್‌ನ ಬೈತೂರಪ್ಪಂಗೆ ತಂದ್ ಒಪ್ಪ್‌ಸಿ" ತ ಹೇಳಿ ಕಳ್‌ಸಿದೊ.

ಹಂಗೆ ತಂದ ಬಿತ್ತ್‌ನ ಬೈಮನ ಮನೆಯವ್‌ರ ಗದ್ದೆಲಿ ಬಿತ್ತಿದೊ. ಫಸಲ್ ಬಾರೀ ಲಾಯ್‌ಕಲಿ ಬಾತ್. ನೋಡ್‌ಕನ ಕದ್‌ರ್‌ಲಿ ಭತ್ತ ಎಲ್ಲಾ ಒಡ್‌ಕಂಡ್ ಅಕ್ಕಿನಂಗೆ ಕಾಂಬತಿತ್ತ್. ಅಂದರೆ ಒಂದ್ ಭತ್ತ, ಒಂದ್ ಅಕ್ಕಿ ಇದ್ದಂಗೆ. ಬೈಮನವ್ ಬಾರೀ ಆಶ್ಚರ್ಯಲಿ ಮತ್ತೆ ಕುಸೀಲಿ ಕದ್‌ರ್‌ನೆಲ್ಲಾ ಕೊಯ್ದ್, ಎತ್ತ್‌ಗಳ ಮೇಲೆ ಹೇರಿಕಂಡ್, ಪೈಯ್ಯಾವೂರಿಗೆ ತಕಂಡೋಗಿ ಒಪ್ಪ್‌ಸಿದೊ. ಅಲ್ಲಿಂದ ವರ್ಸೊಳು ಬೈಮನ ಮನೆಯವ್ ಅವ್ ಬೆಳ್‌ದ ಭತ್ತನ ತಕಂಡ್ ಹೋಗಿ ನೈವೇದ್ಯಕೆ ಕೊಡ್‌ದು ಸಂಪ್ರದಾಯ ಆತ್.

ಬೈಮನವ್‌ಕೆ ಕೇರಳದ ಬೈತೂರಪ್ಪನ ಮೇಲೆ ಈಗೊಳೂ ಬಾರೀ ಭಕ್ತಿ ಉಟ್ಟ್. ಪಂಡ್‌ಲಿ ಅಲ್ಲಿನ ಭಕ್ತರ್‌ಗೆ ಆಶ್ರಯ ಕೊಟ್ಟ್‌ದರ ಗ್ಯಾನ ಮಡಿಕ್ಕಂಡ್ ಬೈಮನ ಮನೆಯವ್‌ಕೆ ಅಲ್ಲಿನ ದೇವಸ್ಥಾನದ ಉತ್ಸವದ ಸಮಯಲಿ ವಿಸೇಸ ಉಪಚಾರ ಮಾಡ್‌ವ ಪದ್ಧತಿ ನಡ್‌ಕಂಡ್ ಬಂದುಟು.

ಜನವರಿ 30 ರ್ಂದ ಫೆಬ್ರವರಿ 2 ನೇ ತಾರೀಕಿನ ಒಳ್ಗೆ ಪೈಯ್ಯಾವೂರ್ಂದ ವರ್ಸಂಪ್ರತಿ "ಕೋರ್ತಜ್ಜ" ಕಾಲ್ನಡಿಗೆಲೇ ಬಂದವೆ. ಕಾವೇರಿ ಹೊಳೆನ ದಾಟಿ, ಕಡಿಯತ್ನಾಡಿಗಾಗಿ ಬಂದ್ ಭುವೇರಂಡ, ಮುಂಡೋಳಂಡ ಮತ್ತೆ ಬೈಮನ ಮನೆ ತಕ್ಕರ್‌ನ ಭೇಟಿಯಾದವೆ. ಪಂಡ್‌ಲಿ ಕೋರ್ತಜ್ಜ ಮಡಿಕೇರಿ ಕೋಟೆಗೆ ಹೋಗಿ ರಾಜನ ಮಾತಾಡ್‌ಸಿಕಂಡ್ ವಾಪಾಸಾಗ್‌ತಿತ್ತ್‌ಗಡ.



'ಕೋರ್ತಜ್ಜ' ಬೈಮನ ಮನೆಗೆ ಬಾಕೆ ಸ್ವಲ್ಪ ದಿನಕೆ ಮುಂದೆಲೇ ದೊಡ್ಡ ಮನೆಲಿ ಗೆಜ್ಜೆನ ಸದ್ದ್ 'ಘಲ್-ಘಲ್' ತ ಕೇಳ್ದಿಗಡ. ದೇವರ ಕತ್ತಿ ಮತ್ತೆ ಒಲಿಂದ ಮಾಡ್‌ದ ಕೊಡೆನ ಹಿಡ್‌ಕಂಡ್ ಕೋರ್ತಜ್ಜ ಬಾಕನ ಐನ್‌ಮನೆ ಹಕ್ಕಲೆ ದಿಬ್ಬಲಿ ನಿತ್ತ್ 3 ಸಾರಿ ಕೂಗ್ ಹಾಕಿ ಓಡಿಕಂಡ್ ಬಂದ್ ಬೈಮನ ಐನ್‌ಮನೆ ಹತ್ತ್‌ವೆ. ಅವ್‌ಕೆ ಬೈಮನವ್ ನೀರ್‌ಕೊಟ್ಟ್, ದೇವರ್‌ಗೆ ದೀಪ ಹೊತ್ತ್‌ಸಿ, ಗಂಧಕಡ್ಡಿ ಹೊತ್ತ್‌ಸಿ "ಬಾಕನ ದಾರಿಲಿ ಏನೂ ತೊಂದರೆ-ತಾಪತ್ರಯ ಆತ್‌ಲೆ ಅಲಾ?" ತ ವಿಚಾರ್‌ಸಿಕಂಡವೆ. ಕೋರ್ತಜ್ಜ ತಂದ ದೇವರ ಪ್ರಸಾದನ ಎಲ್ಲವ್ಕೂ ಹಂಚ್‌ವೆ. ರಾತ್ರಿ 8 ಗಂಟೆ ಸುಮಾರಿಗೆ ಮೀದ್ ಪೂಜೆ ಮಾಡ್‌ಕನ ಕೋರ್ತಜ್ಜಂಗೆ ತಿರುಳ ಬಂದದೆ. ಆ ಸಮಯಲಿ ಪ್ರಶ್ನೆಗಳ್‌ನ ಹಾಕಿ ಬೈಮನವು ತಮ್ಮ ಸಂಶಯಗಳ್‌ನ ಪರಿಹಾರ ಮಾಡಿಕಂಡವೆ. ಅದಾದ ಮೇಲೆ ಕೋರ್ತಜ್ಜ ಹೊರಗೆ ಹೋಗಿ ದೊಡ್ಡ ಸರಲಿ 3 ಸರ್ತಿ ಕೂಗ್ ಹಾಕ್‌ಕನ ಅವರ ಮೈಯಿಂದ ತಿರುಳ ಬುಟ್ಟದೆ. ಆಗೆಲ್ಲಾ ಬೆಂಗಾವಲಿಗೆ ಇಬ್ಬರು ನಿತ್ತಿದ್ದವೆ. 12 ಬಾಚಲ್‌ಲಿ ಒಂದು ಬಾಚಲವು ಕೋರ್ತಜ್ಜನ ಊಟ-ಉಪಚಾರದ ಹೊಣೆ ಹೊತ್ತವೆ. ಮಾರ್‌ನೆ ದಿನ ಹೊರ್‌ಡ್‌ಕನ ಕೋರ್ತಜ್ಜ ಬೈಮನವರ್‌ನ ಬೈತೂರಪ್ಪನ ಉತ್ಸವಕ್ಕೆ ಬಾಕೆ ಆಮಂತ್ರಣ ಕೊಟ್ಟ್ ಬಾವ ದಾರಿಲಿ ಏನೂ ತಾಪತ್ರಯ ಆಗದಂಗೆ ನೋಡಿಕಂಡನೇತ ಭರವಸೆನೂ ಕೊಟ್ಟದೆ. ಪಂಡ್‌ಕಾಲಲಿ ಬೈತೂರಪ್ಪನೇ 'ಕೋರ್ತಜ್ಜ' ನ ವೇಸಲಿ ಬಾತಿತ್ತ್‌ತ ನಂಬಿದ್ದೊಗಡ.

ಬೈತೂರಪ್ಪನ ವಾರ್ಷಿಕ ಉತ್ಸವಕೆ ಒಂದ್ ವಾರಕೆ ಮುಂದೆ ಕೊಟ್ಟೂರ್‌ನ

ಬೈಮನ ಐನ್‌ಮನೆಲಿ, ಪಂಡ್‌ಲಿ ಕೇರಳಂದ ಬಂದ ಭಕ್ತಂಗ ಶಿವನ ಪೂಜೆ ಮಾಡ್‌ದ ಜಾಗೆಲೇ, ಮನೆಯವ್ ಮತ್ತೆ ಬಾವ ನೆಂಟರಿಷ್ಟರ್ ಸೇರಿಕಂಡ್ ವಿಸೇಸ ಪೂಜೆ ಮಾಡಿ ಬೇಡಿಕಂಡವೆ. ಬಂದ ಎಲ್ಲವ್‌ಕೂ ದೇವರ ಪ್ರಸಾದದ ರೂಪಲಿ ಉಂಬಕಿಕ್ಕುವೆ. ಅಂದ್ ಕಳ್‌ಸಕಾದ ಅಕ್ಕಿ ಭತ್ತನ ಕುಟುಂಬದ ಪಟ್ಟೇದಾರನೂ ಮತ್ತೆ ಪೂಜಾರಿಯಾಗಿ ನಿತ್ತವನೂ ಸೇರಿಕಂಡ್ ಅಳ್‌ದವೆ.

ಅಂದ್‌ನ ದಿನ ಹೊತಾರೆನೇ ಪೈಯ್ಯಾವೂರಿಗೆ ಕಳ್‌ಸುವ ಎತ್ತ್‌ಗಳ್‌ನ ತಂದ್ ಮೀಸಿ, ತಿಂಬಕೆ ಹುಲ್ಲು ಕೊಟ್ಟ್, ಹೂಮಾಲೆ, ಬೊಟ್ಟು ಎಲ್ಲಾ ಹಾಕಿ ಅಲಂಕಾರ ಮಾಡಿ ಕಟ್ಟಿ ಹಾಕಿದ್ದವೆ. ಕಳ್‌ಸೊಕಾದ ಭತ್ತನ ಒಂದಿನಕೆ ಮೊದಲೇ ಸುದ್ಧಲಿರವು ಒನಕೆಲಿ ಕುಟ್ಟಿ ಇಸ್‌ವೆ. ಅದ್ ಹೆಂಗೇತೇಳ್ರೆ ಸುರೂಲಿ ಭತ್ತದ ಫಸಲ್ ಕಂಡ್ ಬಂದಂಗೆ ಒಂದ್ ಭತ್ತ, ಒಂದ್ ಅಕ್ಕಿನಂಗೆ ಇರೊಕು. ಯಾಕೇತೇಳ್ರೆ ಬೈಮನವ್‌ರ ಅಕ್ಕಿ ಪೈಯ್ಯಾವೂರ್‌ಲಿ ವರ್ಸಂದ ವರ್ಸಕೆ ಅಂದರೆ ವರ್ಸಯಿಡೀ ನೈವೇದ್ಯಕೆ ಬಂದೇ ಬರೊಕಡ. ಹಂಗಾಗಿ ಭತ್ತನ ಪತಾಯಲಿ ಇಟ್ಟ್‌ಕಂಡ್ ಬೇಕಾಕನ ಅಕ್ಕಿ ಮಾಡಿಕೇತ ಇರ್‌ದು ಕಂಡದೆ. ಸಾಮಾನ್ಯಾಗಿ ಫೆಬ್ರವರಿ 24ಕೆ ಪೈಯ್ಯಾವೂರ್‌ಲಿ ಉತ್ಸವ ಇದ್ದರೆ ಫೆಬ್ರವರಿ 17ಕೆ ಕೊಟ್ಟೂರ್‌ಲಿ ಎತ್ತ್ ಹೊರ್‌ಡುವ ಸಂಭ್ರಮ ಇದ್ದದೆ.

ಹಂಗೆ ಅಂದ್ ಎತ್ತ್‌ಗಳ ಮೇಲೆ ಕೌಂದಿ ಹಾಕಿ ಅಕ್ಕಿ ಚೀಲನ ಎರ್‌ಡೂ ಬದಿಗೆ ಬರುವಂಗೆ ಹೊಲಿಯೊಕು. ಅಕ್ಕಿ ಚೀಲನ ಲಾಯ್‌ಕಲಿ ಒಗ್‌ದು ಒಣ್‌ಗ್‌ಸಿ ಸುದ್ದಲಿ ಇಟ್ಟಿದ್ದವೆ. ಪಂಡ್‌ಲಿ 12 ಬಾಚಲು ಎತ್ತ್‌ಗ ಹೇರ್ ಹೊತ್ತ್ ಹೋಗ್‌ತಿದ್ದೊ. ಈಗ ಅದ್ ಏಳಕೆ ಬಂದುಟು. ಒಂದ್ ಎತ್ತಿಗೆ 10 ಹಾನಿಗಳಷ್ಟ್ ಹೊರೆ ಇದ್ದದೆ. ಊರವು, ನೆಂಟಂಗ ಎಲ್ಲಾ ತಂದ ಅಕ್ಕಿನ ಉಳ್‌ದ ಇನ್ನೊಂದ್ ಎತ್ತ್‌ಗೆ ಹೊರ್‌ಸುವೆ. ಎತ್ತ್‌ಗೆ ಒಬ್ಬನಂಗೆ ಏಳು ಜನ ಬೈಮನ ಮನೆಯವು, ಹರ್‌ಕೆ ಹೊತ್ತವು, ಕುಸಿ ಇರ್‌ವವು ಸೇರಿಕಂಡ್ ಹೊರ್‌ಟವೆ. ಹೊರ್‌ಡ್‌ಕಕನ 'ಬೈತೂರಪ್ಪಂಗೆ ಹೊನ್ನ್‌ನ ಹೇರ್ ಹೊತ್ತ್‌ಕಂಡ್ ಹೊರ್‌ಟೊಳೊ, ಕಡಿಯತ್ತೂರು ದಾರಿಗಾಗಿ ಹೊರ್‌ಟೊಳೊ, ಬೆಣ್ಣೆ ಕಾಡ್‌ಗಾಗಿ ಹೊರ್‌ಟೊಳೊ'ತ ರಾಗಲಿ ದುಡಿ ಕೊಟ್ಟಿಕಂಡ್, ಹಾಡೇಳಿಕಂಡ್ ದಾರಿಯುದ್ದಕ್ಕೂ ಹೋದವೆ. ಭಂಡಾರದ ಹಣ, ಹರ್‌ಕೆ ಹಣ ಎಲ್ಲನ ತಕಂಡೋದು ಇವರ್‌ದೇ ಜವಾಬ್ದಾರಿ. ಹಂಗೆ ಎತ್ತ್‌ಗ ಹೊರ್‌ಡಕನ ದೊಡ್ಡಮನೆಲಿ ಯಾರೂ ನಿಲ್ಲದೆ 4 ಹೆಜ್ಜೆಯಾದರೂ ಇಳ್‌ದ್ ಕಳ್‌ಸಿಕೆ ಹೋಕು.

ಕಾಡು ಕುಂದ್‌ಗಳ್‌ನ ದಾಟಿ ಪೈಯ್ಯಾವೂರಿಗೆ ಹೋಗಿ ಬಾಕೆ 8 ದಿನ ಬೇಕಾದೆ. ಪಂಡ್‌ಲಿ ಹಿಂಗೆ ಹೋಕನ ದಾರಿಲಿ ತಿಂಬಕೆ ಬಾರೀ ರುಚಿನ ಬೆಲ್ಲದ ರೊಟ್ಟಿನೂ (ಬೆಲ್ಲದ ಜೋನಿಲಿ ಅಕ್ಕಿ ಹುಡಿನ ಕಲ್‌ಸಿ ಒಳ್ಳೆ ಮೆಣಸ್ ಹಾಕಿ ಮಾಡ್‌ವ ರೊಟ್ಟಿ), ಮಣ್ಣ್‌ನ ಚೆಟ್ಟಿಲಿ ಮಾಡ್‌ದ ಹುಣ್‌ಸೆ ಬೆಲ್ಲದ ಪಜ್ಜಿನೂ ಬುತ್ತಿ ಕಟ್ಟಿ ಕೊಡ್‌ತಿದ್ದೊಗಡ. ಹಂಗೆನೇ ಮುಳಿಯಕ್ಕಿನ ಬೇಸಿ, ಹುಣ್‌ಸೆ ಪಜ್ಜಿ, ಮೊಸ್ರು,

ಸುಂಠಿನ ಜಜ್ಜಿ ಹಾಕಿ ಅನ್ನಕೆ ಕಲ್‌ಸಿ, ಕೂಗಲೆ ಎಲೆಗಳ್‌ನ ತಾವರೆ ಹೂನಂಗೆ ಇಟ್ಟ್ ಅದ್‌ರ ನೊಡುಲಿ ಈ ಮೊಸ್ರನ್ನನ ಹಾಕಿ ಮಡ್‌ಚಿ ಕೊಡ್‌ತಿದ್ದೊಗಡ. ಒಂದೊಂದ್ ಬುತ್ತಿಲೂ ಒಂದೊಂದ್ ಸೇರಕ್ಕಿ ಅನ್ನ.. ಒಂದು ಬುತ್ತಿಕಟ್ಟ್‌ನ ಬಿಚ್ಚಿ 2–3 ಜನ ತಿಂಬತಿದ್ದೊಗಡ, ಈ ಮೊಸ್ರನ್ನ, ಬೆಲ್ಲರೊಟ್ಟಿ, ಪಜ್ಜಿ ಎಲ್ಲನೂ ಎಷ್ಟ್ ದಿನ ಆದರೂ ಹಂಗೇ ಇರ್‌ತಿತ್ತ್‌ಗಡ. ಹೋಗಿ ವಾಪಾಸ್ ಬಂದ್ ತಿಂಬಕನೂ ಅದ್‌ರ ರುಚಿ ಹಂಗೇ ಇರ್‌ತಿತ್ತ್‌ತ ಹೇಳ್‌ವೆ. ಈಗೆಲ್ಲಾ ಅನ್ನ ಮಾಡಿಕೆ, ಗೈಪಿಗೆ ಬೇಕಾದ ಮಡ್‌ಕೆ, ಪಾತ್ರೆ, ಸೆಡೆಗಳ್‌ನ ಜೋಡಿಸ್‌ಕಂಡ್ ಸಾಮಾನ್‌ಗಳ್‌ನ ಎತ್ತ್‌ನ ಮೇಲೆ ಹೇರಿಕಂಡೇ ಹೋದವೆ.

ಕಾಡ್‌ಲಿ ಬಂಡೆ ಕಲ್ಲ್‌ಗಳ ಮೇಲೆ ಮಲ್‌ಕಂಡೇ ಎರ್‌ಡ್ ಇರುಳ್‌ನ ಕಳ್‌ದವೆ. ಯಾರಾದ್ರೂ ಒಬ್ಬ ಈ ಸಮಯಲಿ ಎಚ್ಚರ ಇರಕಾದೆ. ಹಿಂದೆ ಒಂದ್ ಸಾರಿ ಎಲ್ಲವೂ ಮಲ್‌ಗಿ ನಿದ್ದೆ ಹೋಗಿರ್‌ಕನ ಒಂದ್ ಹುಲಿ ಅಲ್ಲಿಗೆ ಬಾತ್‌ಗಡ. ಆಗ ಎಲ್ಲಾ ಎತ್ತ್‌ಗ ಒಮ್ಮೆಲೇ ಎದ್ದ್ ಗಂಟೆ ಅಲ್ಲಾಡ್‌ಸ್‌ಕನ ಹುಲಿ ಹೊರ್‌ಟ್ ಹೋತ್‌ಗಡ. ಇದ್‌ರ ಬಗ್ಗೆ ಪೈಯ್ಯಾವೂರ್‌ಲಿ ಕೇಳಕನ ಬೈತೂರಪ್ಪನೇ ಹುಲಿ ವೇಸಲಿ ಬಂದದ್ ಗೊತ್ತಾತ್‌ಗಡ. ಅಲ್ಲಿಂದ ಯಾರಾದರೊಬ್ಬ ಜಾಗರಣೆ ಇದ್ದ್‌ಕಂಡ್ ಎತ್ತ್‌ಗಳ ನೋಡಿಕಂಡವೆ.

ಇನ್ನೊಮ್ಮೆ ಪೈಯ್ಯಾವೂರ್‌ಲಿ ಅಕ್ಕಿ ಒಪ್ಪ್‌ಸಿಬುಟ್ಟ್ ಎತ್ತ್‌ಗಳ್‌ನ ಮೇಯಕೆ ಬುಟ್ಟಿದ್ದೊ. ಅಲ್ಲಿಂದ ಒಂದ್ ಎತ್ತ್ ತಪ್ಪಿಸ್‌ಕಂಡತ್. ಆಗ ಅಲ್ಲಿ ದೇವ್ರು "ಎತ್ತ್‌ನ ನಾನ್ ನೋಡಿಕಣೆ ನೀವ್ ವರ್ಸ ಕಳ್‌ದ್ ಬನ್ನಿ" ತ ಹೇಳ್ತ್‌ಗಡ. ಮರುವರ್ಸ ಹೋಕನ ಎತ್ತ್ ಹಾರಿ ಕುಣ್‌ಕಂಡ್ ಬಾತ್‌ಗಡ. ಹಂಗಾಗಿ ಕೋರ್ತಜ್ಜ ಬಾಕೆ ಮುಂದೆ ದೊಡ್ಡಮನೇಲಿ ಗೆಜ್ಜೆ ಸದ್ದ್ ಕೇಳ್‌ದೇತ ಹೇಳ್‌ವೆ.

ಹಿಂಗೆ ಕಾಡ್‌ದಾರಿಲಿ "ಓ ಹೊಯ್, ಓ ಹೊಯ್. ಓ ಹೊಯ್" ತ ಬೊಬ್ಬೆ ಹಾಕಂಡ್ ಹೋದವೆ. ಈಗೆಲ್ಲಾ ಹಿಂಗೆ ಹೋಗುವವ್‌ಕೆ ದಾರಿಲಿ ಸಿಕ್ಕುವ ಕೆಲವು ಮನೆಯವ್ ಮಜ್ಜಿಗೆ ಕುಡಿಯಕೆ, ತಿಂಬಕೆ ಹಣ್ಣ್‌ಗಳ್‌ನ ಎಲ್ಲಾ ಕೊಟ್ಟು ಉಪಚರಿಸುವೆ. ಹಿಂಗೆ ಮಾಡ್‌ದ್‌ವ್ ವೃದ್ಧಿ ಕಂಡದ್‌ರಿಂದಾಗಿ ಬೈತೂರಪ್ಪನ ಭಕ್ತರ ಸಂಖ್ಯೆ ಹೆಚ್ಚಾವುಟು.

ಐದು ದಿನಗಳ ಕಾಲ ನಡಿವಂತ ಬೈತೂರಪ್ಪನ ಉತ್ಸವಲಿ ಕುಪ್ಪಸದಟ್ಟಿ ಹಾಕಂಡ್ ತಕ್ಕರಾಗಿ ನಿಲ್ಲುವಂತ ಸ್ಥಾನಮಾನ ಬೈಮನ ಮನೆಯವ್‌ಕೆ ಸಿಕ್ಕುಟ್. ಬೈಮನ ಮನೆಯವ್ ತಕಂಡೋದ ಅಕ್ಕಿ–ಭತ್ತನ ಮಾತ್ರ ಬೈತೂರಪ್ಪನ ದೇವಸ್ಥಾನದ ಆಡಳಿತ ಮಂಡಳಿಯವ್ ದೇವಸ್ಥಾನದ ಮುಂಬಾಗ್‌ಲಿಂದನೇ ಹತ್ತ್‌ಸ್‌ಕಂಡವೆ. ಹಕ್ಕಿಗ ಹಾರಿಕೆ ಮುಂದೆ ಕಾಣಿಕೆನ ದೇವ್ರಿಗೆ ಒಪ್ಪ್‌ಸುದು ಪದ್ಧತಿ ಗಡ. ಬೇರೆ ಯಾರೇ ಹೊರೆ ಕಾಣಿಕೆನ ತಂದರೂ ಸನ ಅದ್‌ನ ಹಿಂಬಾಗ್‌ಲಿಂದನೇ ತಕಂಡವೆ, ಎತ್ತ್‌ನ ಹೇರ್ ಹೊರಡ್‌ಕನ ಬೈಮನ ಮನೆಯವೇ ಮುಂದೆ ಹೆಜ್ಜೆ ಹಾಕೊಕು.

ಅಟ್ಟಿ



ಬಾಕನ ಬೈಮನ ಮನೆಯವ್ ಕಡೇಲಿ ಬಂದ್ ಐನ್‌ಮನೆ ಹತ್ತೊಕುಗಡ. ಏನೇ ಆದರೂ ಇಲ್ಲಿಗೆ ಮುಟ್ಟ ಕಾಲ್ನಡಿಗೆಲಿ ಹೋಗಿ ಬಂದ ಎತ್ತ್‌ಗಳ್‌ಗಾಗಲೀ, ಮನ್‌ಸರಿಗಾಗಲೀ ಯಾರಿಗೂ ಎಂತದೇ ತಾಪತ್ರಯ ಆತ್‌ಲೇತ ಹೇಳ್‌ದು ಆಶ್ಚರ್ಯ ಆದರೂ ಸತ್ಯ. ಮತ್ತೆ ಬಾಕನ ಎಷ್ಟ್ ಎತ್ತ್‌ಗ ಇದ್ದರೂ ಬೈಮನವ್‌ರ ಎತ್ತೇ ಸುರೂಲಿ ಐನ್‌ಮನೆ ತಲ್‌ಪಿದೆಗಡ.

ಪೈಯ್ಯಾವೂರ್‌ಗೆ ಎತ್ತ್‌ಗ ಹೊರ್‌ಡುವ ದಿನ ಎಂತದೇ ಸೂತಕ ಆದರೂ ಹೋದು ಮಾತ್ರ ನಿಲ್ಸಿಕಾಗದ್‌ಗಡ. ಸಾವ್–ನೋವೇನಾದರೂ ಆದ ಪಕ್ಷಲಿ ಸಾವ್‌ನ ಹೊತಾರೆ ತೆಗ್‌ದು ಅಥವಾ ಹಿಂಬಾಗ್‌ಲ್‌ಂದಾದರೂ ಎತ್ತ್‌ಗಳ್‌ನ ಹೊಡ್‌ಕಂಡ್ ಹೋಕಾದೆಗಡ. ಯಾವ ಕಾರಣಕೂ ಹೋದ್ ತಪ್ಪಿಸಿಕಾಗದ್‌ತ ಹೇಳ್‌ವೆ. ಎತ್ತ್‌ನ ಮೇಲೆ ಹೇರಿಕಂಡ್ ಹೋಕನ ಹೆಚ್ಚ್‌ನ ಭತ್ತ ಗೋಣಿಚೀಲಲಿ ಉಜ್ಜಿ ಉಜ್ಜಿ ಅಕ್ಕಿಯಾಗಿದ್ದದೆ! ಚೋಮನ ಕುಂದ್‌ನ ದಾಟಿ ಹೋಕನ ಒಮ್ಮೆ ಒಂದ್ ಎತ್ತ್ ಕಾಲ್ ಜಾರ್‌ತ್ ಗಡ, ಈ ಕುಂದ್‌ಲಿ ಮೇಲೆ ನೋಡ್‌ರೆ ಬಂಡೆಕಲ್ಲ್‌ಗ ನೇತಾಡಿಕಂಡ್ ಕಂಡವೆ. ಕೆಳಗೆ ನೋಡ್‌ರೂ ಪಾತಾಳಲಿ ಪಾರೆಕಲ್ಲ್‌ಗಳೇ ! ಹಿಂಗಿರ್‌ಕನ ಕಾಲ್ ಜಾರ್‌ರೆ ಸೀದಾ ಪಾತಾಳಕೇ ಹೋದು, ಹಂಗೆ ಎತ್ತ್‌ನ ಕಾಲ್ ಜಾರ್‌ಕನ ಒಂದು ಬಂಡೆಕಲ್ಲ್, ಮೇಲೆಂದ ಸೀದಾ ಜಾರಿ ಎತ್ತ್‌ನ ಹೆಜ್ಜೆಯಿಡಿಕೆ ಸರಿಯಾಗಿ ಕುದ್ದ್ ಅದ್‌ನ ಕಾಪಾಡ್‌ತೂತ ಹೇಳ್‌ವೆ. ಹಂಗಾಗಿ ಈಗೊಳೂ ಆ ಕಲ್ಲ್‌ನ ಮೇಲೆ ಭಸ್ಮ ಇಟ್ಟ್ ಹಣೆನ ಮೂರು ಸರ್ತಿ ಕಲ್ಲ್‌ಗೆ ಮುಟ್‌ಸಿ ನಮಸ್ಕಾರ ಮಾಡಿಯೇ ಹೋದು ಪದ್ಧತಿ ಆವ್‌ಟು. ಹೆಣ್ಣ್ ಜನಗ ಈ ದಾರಿಲಿ ಹೋಕೆ ಬೊತ್ತ್‌ಗಡ.

ಪೈಯ್ಯಾವೂರ್‌ನ ಬೈತೂರಪ್ಪನ ದೇವಸ್ಥಾನಲಿ ಬೈಮನ ಮನೆಯವು ಒಪ್ಪ್‌ಸಿದ ಕೆಂಪಕ್ಕಿನ ವಾರ್ಷಿಕೋತ್ಸವದ ಪ್ರಸಾದಕೂ, ವರ್ಸ‌ಯಿಡೀ ನೈವೇದ್ಯಕೂ ಉಪಯೋಗಿಸುವೆ. ಒಂದ್ ಹಿಡಿಯಾದರೂ ಈ ಕೆಂಪಕ್ಕಿ ನೈವೇದ್ಯಕೆ ಸೇರೊಕು. ಎತ್ತ್‌ನೊಟ್ಟಿಗೆ ಹೋದವು ಉತ್ಸವನ ನೋಡಿಕಾಗದ್‌ಗಡ. ಬೇರೆಬೇರೆ ಕಡೆಂದ ತೆಂಗಿನ ಕಾಯಿನ ಹೊರೆಗ, ಬಿದ್‌ರ್‌ನ ಕಟ್ಟಿಗೆಲಿ ತೂಗಿ ಹೊತ್‌ಕಂಡ್ ಬಾವ ಬಾಳೆಗೊನೆಗ, ಕೊಟ್ಟತಲೆಲಿ ಎಣ್ಣೆನ ಪಾತ್ರೆಗ ಬಂದ್ ಹಿಂಬಾಗ್‌ಲಿಂದ ನುಗ್ಗುಕನ

ಬೈಮನವು ಅಲ್ಲಿಂದ ಹೊರ್‌ಟವೆ. ಅಲ್ಲಿನವು ಬಾಚಲಿಗೆರ್‌ಡ್ ಕಾಯಿಗಳ್‌ನ, ದಾರಿ ಖರ್ಚಿಗೇತ ಎಣ್ಣೆ, ಬೇಳೆ ತರಕಾರಿ, ಅಕ್ಕಿ ಸಾಮಾನ್‌ಗಳ್‌ನೆಲ್ಲಾ ಹೊರ್‌ಸಿ ಕಳ್‌ಸುವೆ. ಹೋದವೆಲ್ಲಾ ವಾಪಾಸ್ ಬಾಕನ ಐನ್‌ಮನೆನ ಸುದ್ಧ ಮಾಡಿ, ದೇವರ ದೀಪ ಹೊತ್ತ್‌ಸಿ ಮನೆಯವು ಕಾದವೆ. ಬಾಕನ ತಂದ ಎಣ್ಣೆನೂ, ದೀಪಕೆ ಸುರ್‌ದವೆ. ಎತ್ತ್‌ಗಳ್‌ಗೆ ದೃಷ್ಠಿ ತೆಗ್‌ದವೆ. ಎತ್ತ್‌ಗ ಕಾಡ್‌ದಾರಿಲಿ ನಡ್‌ಕಂಡ್, ಮಲ್ಕಂಡ್ ಬಂದ್ ದೃಷ್ಠಿ ಆಗಿದ್ದದೇತೇಳ್ವ ನಂಬಿಕೆಲಿ ಹೊಗೆ ಮತ್ತೆ ಕುರ್‌ದಿ ನೀರ್‌ನ ಚೆಲ್ಲಿ ದೃಷ್ಠಿ ನಿವಾಳ್‌ಸುವೆ. ಊರ ದೇವರಿಗೇತ ಕಳ್‌ಸಿದ ತೆಂಗಿನ ಕಾಯಿನ ಅಲ್ಲಿಗೆ ತಲ್‌ಪಿಸ್‌ವೆ. ಉಳ್‌ದದನ ಹಂಚಿಕಂಡವೆ. 2 ಕಾಯಿಗಳ್‌ಗೆ ಕಲ್ಲ್‌ಲಿ ಗುರಿಯಿಟ್ಟ್ ಹೊಡ್‌ದವೆ. ಹರ್‌ಕೆ ಕೊಟ್ಟವ್‌ಕೆಲ್ಲಾ ಪ್ರಸಾದ ತಲ್‌ಪ್‌ಸುವೆ. ಎಲ್ಲವೂ ಸೇರಿ ಊಟ ಮಾಡಿ ಅವ್‌ರವರ ಮನೆಗೆ ಹೋದವೆ.

ಮಾಡ್‌ದ ಸಣ್ಣ ಉಪಕಾರನ ನೆಂಪುಲಿಟ್ಟ್‌ಕಂಡ್ ಕೇರಳದ ಬೈತೂರಪ್ಪನ ಭಕ್ತರ್ ತೋರ್‌ಸುವ ಕೃತಜ್ಞತಾ ಭಾವ ಒಳ್ಳೆ ಸಂಪ್ರದಾಯ ಆಗಿ ಮುಂದ್‌ವರ್‌ಕಂಡ್ ಬಂದುಟ್. ಹಿಂಗೆ ಬೈತೂರಪ್ಪನ ದಯೆಂದ ಬಂಡಾಟ ದೂರಾಗಿ, ಬೈಮನ ಮನೆತನ ವೃದ್ಧಿಯಾಗಿ ಈಗ ದೊಡ್ಡ ಕುಟುಂಬ ಆವ್‌ಟೂತ ಬೈಮನ ಕುಟುಂಬದ ಪಟ್ಟೇದಾರ್‌ರೂ, ನನ್ನ ದೊಡ್ಡಪ್ಪನೂ ಆದ 98 ವರ್ಸದ ಬೈಮನ ಆರ್. ಪೊನ್ನಪ್ಪನವು ಬಾರೀ ಕುಸೀಲಿ ಹಂಗೆನೆ ಭಕ್ತಿಲಿ ಹೇಳ್‌ವೆ.







# ಕೊಡ್‌ಗ್‌ನ ಕುಲದೇವಿ ಕಾವೇರಮ್ಮ

ಲೋಕಕಲ್ಯಾಣಕಾಗಿ ಗಂಡನ ಬುಟ್ಟು ಜಲರೂಪಿಣಿ ಆದಂತ ಅವ್ವ ಕಾವೇರಿ ಕೊಡ್‌ಗ್‌ನ ಜನ್‌ರ ಕುಲದೇವತೆ. ಏಳ್ ಪುಣ್ಯ ನದಿಗಳ್‌ಲಿ ಕಾವೇರಿನೂ ಒಂದ್. "ಗಂಗೇಚ ಯಮುನೇಚೈವ ಗೋದಾವರೀ ಸರಸ್ವತಿ, ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು" ತ ಹೇಳ್‌ವ ಸ್ತೋತ್ರದೊಟ್ಟಿಗೆ ಪೂಜೆಗ, ಒಳ್ಳೆ ಕಾರ್ಯಗ ಸುರುವಾದವೆ. ಕೊಡ್‌ಗೂತ ಹೇಳ್‌ರೆ 'ಕಾವೇರಿ' ತೇಳ್‌ವಷ್ಟ್ ಹಾಸ್‌ಹೊಕ್ಕಾದ ಈ ಹೊಳೆ ಕೊಡ್‌ಗ್‌ನ ಜನ್‌ರ ನಾಡಿಮಿಡಿತಾತ ಹೇಳಕ್. ಕಾವೇರಿನ 'ಅರ್ಥ ಪ್ರದಾಯಿನಿ' ತ ಕರ್‌ದವೆ. "ಅರ್ಥ" ತ ಹೇಳ್‌ರೆ 'ಸಂಪತ್ತು'. ಅಂದರೆ ಜನ್‌ರ ದುಡ್ಡ್‌ಕಾಸ್‌ನ ವೃದ್ಧಿಗೆ ಇವಳ ಅನುಗ್ರಹ ಬೇಕೇ ಬೇಕಾದೆ. ಕಾವೇರಿ ಬರೀ ನೀರ್ ಖಂಡಿತಾ ಅಲ್ಲ. ಅದೊಂದ್ ಸಕ್ತಿ. ದೇಸದ ಎಷ್ಟೋ ರೈತರ ಜೀವ ಕಾವೇರಿ, ಆಸರೆನೂ ಕಾವೇರಿ.

ಕಾವೇರಿನ ಸನ್ನಿಧಿ ನಾವ್‌ಗೆ ಪುಣ್ಯನೂ ಕೊಟ್ಟದೆ, ಮೋಕ್ಷನೂ ಸಿಕ್ಕಿದೆ. ಕೃತಯುಗಲಿ ಕಾವೇರಿನ ನೋಡ್‌ದವಕೆ ಪುಣ್ಯ ಸಿಕ್‌ತಿತ್‌ಗಡ. ತ್ರೇತಾಯುಗಲಿ ಅವಳ್‌ನ ಮುಟ್ಟಿದವ್‌ಕೆ ಪುಣ್ಯ. ಆದರೆ ದ್ವಾಪರ ಯುಗಲಿ ಅವಳ ತೀರ್ಥಲಿ ಮೀಯಕನ ಪುಣ್ಯ ಬಾತಿತ್ತ್‌ಗಡ. ಈ ಕಲಿಯುಗಲಿ ಪುಣ್ಯ ಸಿಕ್ಕೊಕೂತಾದರೆ ಕಾವೇರಿನ ಭಕ್ತಿ ಭಾವಲಿ ಪೂಜೆ ಮಾಡೊಕೂತ ಹೇಳ್‌ವೆ. ಕಾವೇರಿ ತೀರ್ಥಲಿ ಮೀದರೆ ಅದ್‌ರ ಪುಣ್ಯಫಲಂದ ಅವರ ಪೂರ್ವಜರು 15 ವರ್ಷ ಮುಟ್ಟ ಕುಸೀಲಿ ಇದ್ದವೆಗಡ !

ಕಾವೇರಿ ತೀರ್ಥೋದ್ಭವಾತ ಹೇಳ್‌ದು ಕೊಡ್‌ಗಿನವ್‌ಕೆ ಬಾರೀ ಸಂಭ್ರಮದ ಹಬ್ಬ. ಪುಣ್ಯ ಸಂಕ್ರಮಣ ಕಾಲಲಿ ತುಲಾರಾಶಿ ಸೂರ್ಯನ ಪ್ರವೇಶಿಸ್‌ಕನ ಕಾವೇರಿ

ತೀರ್ಥೋದ್ಭವ ಆದೆ. ಲೋಕದ ಉದ್ಧಾರಕಾಗಿ ಜಲರೂಪಿಣಿಯಾದ ಅಗಸ್ತ್ಯ ಕುಂಡಿಕೆಂದ ಕಾವೇರಿ ಉದ್ಭವಿಸಿ ಭಕ್ತರ್‌ಗೆ ದರ್ಶನ ಕೊಟ್ಟದೆ. ಆ ಸಣ್ಣ ಕುಂಡಿಕೆಂದ ಕಾವೇರಿ ಎದ್ದ್ ಬಾವಂತ ಕ್ಷಣ ಎಲ್ಲರ್‌ನೂ ರೋಮಾಂಚನಗೊಳ್‌ಸಿದೆ. ಹಂಗೆ ಕಾವೇರಿ ಮೇಲೆ ಬಾಕನ ನೀರ್‌ನ ಬುಗ್ಗೆ ಕುಂಡಿಕೆಂದ ಹೊರಗೆ ಬಂದ್ ಚೆಲ್ಲಿ ಹೋದರೆ ನಾಡಿಗೇ ಕೇಡಾದೇತ ಹೇಳ್‌ದು ನಂಬಿಕೆ. ಹಂಗಾಗಿ ಪೂಜೆಗೆ ಕುದ್ದ್‌ಕಂಡಿರುವಂತ ಹಾರಂವಂಗ ಮೇಲೆ ಉಕ್ಕುವ ನೀರ್‌ನ ಪಾತ್ರೆಗಳ್‌ಲಿ ತೆಗ್‌ದ್ ತೆಗ್‌ದ್ ಭಕ್ತರ ಮೇಲೆ, ಕೆರೆಗೆ ಚೆಲ್ಲುವೆ. ಕಾವೇರಿ ಉಕ್ಕಿ ಹೋಗದಂಗೆ ತಡ್‌ದವೆ. ಕಾವೇರಿ ಸಂಕ್ರಮಣ ಆಗಿ ಒಂದು ತಿಂಗಳೊಳಗೆ ಇಲ್ಲಿಗೆ ಬಂದ್ ಮೀದರೆ ಪುಣ್ಯ ಸಿಕ್ಕಿದೇತ ಹೇಳ್‌ವೆ. ತಲಕಾವೇರಿಗೆ ಹೋಕೆ ಆಗದವು ಬಲಮುರಿಗೆ ಹೋಗಿಯಾದರೂ ಮೀಯೊಕು.

ಕಾವೇರಿ 'ತೀರ್ಥ ಸ್ವರೂಪಿಣಿ' ಯಾಗಿ ಜಲರೂಪಲಿ ಹೊರ್‌ಟಂತ ದಿನನ 'ಕಾವೇರಿ ಸಂಕ್ರಮಣ'ತ ಕೊಡ್‌ಗ್‌ಲಿ ಆಚರಿಸುವೆ. ಅಕ್ಟೋಬರ್ 17 ರಂದು ವರ್ಸೋಳು ತುಲಾ ಸಂಕ್ರಮಣದಂದ್ ತಲಕಾವೇರಿನ ಕುಂಡಿಕೆಲಿ ತೀರ್ಥ ಬಂದದೆ. ಕೊಡ್‌ಗ್‌ನ ಪ್ರತೀ ಕುಟುಂಬಂದ ಒಬ್ಬನಾದರೂ ತಲಕಾವೇರಿಗೆ ಹೋಗಿ ತೀರ್ಥ ತಕಂಡ್‌ಬಂದ್ ಹೋಗದವ್‌ಕೆ ಹಂಚುದು ಪದ್ಧತಿ.

ಕಾವೇರಿ ಸಂಕ್ರಮಣಲಿ ತೀರ್ಥ ಬಾಕೆ ಒಂದಿನಕೆ ಮುಂದೆ ಮನೆ ಮುಂದೆಲಿ, ತೋಟ ಗದ್ದೆಲೆಲ್ಲಾ ಬೆತ್ತ್‌ನ ಕುತ್ತಿ ಇಸಿದ್ದವೆ. ಅದ್‌ಕೆ ಹೂಗಳ್‌ನ ಇರ್‌ಸಿ ಅಲಂಕಾರನೂ ಮಾಡಿದ್ದವೆ. ತೀರ್ಥ ಬಂದ ಮಾರನೆ ದಿನ ಹೊತಾರೆ ಕೋಳಿ ಕೂಗುವ ಹೊತ್ತಿಗೆ ಎದ್ದ್ ಮೀದ್‌ಬಂದ್, ಸುದ್ದಲಿ ದೋಸೆ ಹೊಯ್‌ದ್, ಅದ್‌ನ ಕೊಡಿ ಬಾಳೆಲೆಲಿ ಮಡ್‌ಗುವೆ. ಈ ದೋಸೆನೊಳಗೆ ತೆಂಗ್‌ನ ಕಾಯಿ ತುರಿ, ಬಾಳೆಹಣ್ಣ್, ತುಪ್ಪ, ಸಕ್ಕರೆ ಹಾಕಿ ಇಸಿ, ನೆಣೆ ಹೊತ್ತ್‌ಸಿ ಗದ್ದೆಲಿರ್‌ವ "ಪೊಂಗೆ ಬೆತ್ತ್"ನ ಮೇಲೆ ಮಡ್‌ಗಿ ಕಾವೇರಮ್ಮನ, ಭೂಮಿತಾಯಿನ ಮೂರು ಸತಿ ಕೂಗಿ ಕರ್‌ದ್ " ಕೂ....ಕೂ....ಕೂ,,,," ತ ಜೋರ್‌ಲಿ ಸದ್ದ್ ಮಾಡುವೆ.

ಹಿಂಗೆ ಹಿಟ್ಟ್‌ನ ಇಸಿಕೆ ಸಾಮಾನ್ಯಾಗಿ 'ಪೊಂಗೆ ಬೆತ್ತ್' ನ ಉಪಯೋಗಿಸುವೆ. ಮೂರು ಪೊಂಗೆ ಬೆತ್ತ್‌ನ ಕುಟುಂಬದ ಕದ್‌ರ್ ಕೊಯ್ಯುವಂತ ದೊಡ್ಡ ಗದ್ದೆಲಿ ಕುತ್ತ್‌ವೆ. ತ್ರಿಕೋನಾಕಾರಲಿ ಈ ಬೆತ್ತ್‌ಗಳ್‌ನ ಕುತ್ತಿ ಅದ್‌ಕೆ 'ನೋಕಟೆ ಬಳ್ಳಿ'ನ ಲಾಯ್ಕಲಿ ಸುತ್ತಿ ದೋಸೆ ಹಿಟ್ಟ್ ಇಸ್‌ಕನ ಬೀಳದಂಗೆ ಮಾಡಿದ್ದವೆ. ಇನ್ನ್ ಮನೆ ಮುಂದೆ, ತೋಟ, ಬೇರೆ ಗದ್ದೆಲೆಲ್ಲಾ ಒಂದೊಂದ್ ಕಬರ್ ಇರ್‌ವ ಬೆತ್ತ್‌ಗಳ್‌ನ ಕುತ್ತಿಸುವೆ. ಅದ್‌ಕೆ ಸನ ನೋಕಟೆ ಬಳ್ಳಿ, ಹೂಗಳ ಅಲಂಕಾರ ಇರೊಕು.

ಈ ದೋಸೆ ಹಿಟ್ಟ್ ಮಾಡ್‌ಕನ ಯಾವ್‌ದೇ ಕಾರಣಕೂ ಅನ್ನ ಹಾಕುವಂಗಿಲ್ಲೆ. ಹಾಕಿರೆ ಮಡೆ ಆದೇತ ಹೇಳ್‌ವೆ. ಹಂಗಾಗಿ ನೆನೆ ಹಾಕಿದ ಅಕ್ಕಿಲಿ ಸ್ವಲ್ಪ ತೆಗ್‌ದ್ ತರಿಗಂಜಿ ಕಾಯ್‌ಸಿ, ತಣ್‌ಸಿ ಅದ್‌ರೊಟ್ಟಿಗೆ ದೋಸೆ ಬಂದಕೆ ಕಡ್‌ದ್ ಇಸುವೆ.

ಹಂಗೆ ಇಸ್‌ಕನ ಅಂಗೈ ಮತ್ತೆ ಬೆರಳ್‌ಗಳ್‌ನ ದೋಸೆ ಬಂದಲಿ ಮುಳ್‌ಗಿಸಿ ತೆಗ್‌ದ್ ಗೋಡೆ ಮೇಲೆ ಹಂಗೇ ಕಾಂಬಂಗೆ ಮೆತ್ತ್‌ವೆ. (ಅದ್ ಸೆಗಣಿ ಗೋಡೆ ಮೇಲೆ ಎದ್ದ್ ಕಾಂಬತಿತ್ತ್) ಈ ಬಂದಲಿ ಸತ್ತ ಹಿರಿಯವ್ ದೋಸೆ ಮಾಡಿಕಂಡ್ ತಿಂದವೇತ ದೊಡ್ಡವ್ ಹೇಳ್‌ತಿದ್ದೊ! ಹಿಂಗೆ ಇಡದೇ ಹೋದರೆ ದೋಸೆ ಬಂದನೂ ಸರಿಯಾಗಿ ಬೆಳದ್ ಬಾತಿತ್‌ಲೆಗಡ !

ಮತ್ತೆ ಈ ಬೆತ್ತ್ ಕುತ್ತ್‌ವ ಬಗ್ಗೆ ಒಬ್ಬೊಬ್ಬರತ್ರ ಒಂದೊಂದು ಕತೆನ ನಾವ್ ಕೇಳ್‌ವೆ. ಪಂಡ್‌ಲಿ ಕೊಡಗು ಪಾಂಡವರದಾಗಿತ್ತ್‌ಗಡ. ಅವು ವನವಾಸಕೆ ಹೋಗಿರ್‌ಕನ ಕಾವೇರಿ ತೀರ್ಥ ಬಂದ್, ಭೂಮಿನ ರಾಜವಂಶದವ್‌ಕೆ ಕೊಟ್ಟಿತ್‌ಗಡ. ಹಂಗಾಗಿ ಪಾಂಡವು ಕಾವೇರಿ ಸಂಕ್ರಮಣಲಿ ಬಂದ್ ಭೂಮಿನ ಕೊಡುವಂಗೆ ಕಾವೇರಿನ ಬೇಡುವೆ. ಆಗ ಕಾವೇರಮ್ಮ ಬೆತ್ತ್‌ಗಳ್‌ನ ನೋಡಿ “ಎಲ್ಲವೂ ಬೆತ್ತ್ ಕುತ್ತಿ ಇಸಿಯೊಳೊ. ಈಗ ಕೊಡಿಕಾದುಲೆ. ಶಿವರಾತ್ರಿಲಿ ಬಂದರೆ ಕೊಡ್‌ಸಿನೆ”ತ ಹೇಳ್‌ದೆಗಡ. ಮತ್ತೆ ಪಾಂಡವು ಬಂದ್ ಶಿವರಾತ್ರಿಲಿ ತಮ್ಮ ಭೂಮಿನ ಕೊಡ್‌ಸಿಕೆ ಕಾವೇರಮ್ಮನ ಕೇಳ್‌ವೆ. ಆಗಲೂ ಅವ್ವ ಕಾವೇರಿ “ಎಲ್ಲವೂ ಅವ್‌ರವರ ಗದ್ದೆಗೆ ಗೊಬ್ಬರ ಹಾಕಿಸೊಳೊ. ನಾ ಹೆಂಗೆ ಕೊಡಿತಾದೆ? ಕಾವೇರಿ ಸಂಕ್ರಮಣದ ಸಮಯಲಿ ಬನ್ನಿ“ತ ಪಾಂಡವರ್‌ನ ವಾಪಾಸ್ ಕಳ್‌ಸಿದೆಗಡ. ಎಲ್ಲಿಯಾದರೂ ಕಾವೇರಮ್ಮ ತಮ್ಮ ಭೂಮಿನ ಪಾಂಡವ್‌ಕೆ ಕೊಟ್ಟ್ ಬುಡ್ದೊತ ಹೆದರಿಕಂಡ್ ಕೊಡಗಿನವ್ ತಮ್ಮ ಭೂಮಿ ಹಕ್ಕ್‌ನ ತೋರ್‌ಸಿಕೆ ಎಲ್ಲಾ ಕಡೆ ಬೆತ್ತ್ ಕುತ್ತಿ ಇಸುದೂತ ಪಂಡ್‌ಂದ ಹೇಳಿಕಂಡ್ ಬಂದೊಳೊ. ಒಟ್ಟಾರೆ ಬೆತ್ತ್ ಕುತ್ತುದು ಕಾವೇರಿ ಸಂಕ್ರಮಣ ಸಮಯಲಿ ಸಂಪ್ರದಾಯನೇ ಆಗಿ ಮುಂದುವರ್‌ದುಟು.

ಹೆಚ್ಚಿನವು ಇದ್ಯಾವುದನೂ ಗ್ಯಾನ ಮಾಡದೆ, ಅದ್‌ಕಾಗಿ ತಲೆ ಕೆಡ್‌ಸಿಕಣದೆ, “ಅಪ್ಪ ಮನಿ ಬೆತ್ತ್ ಕುತ್ತ್‌ತಿದ್ದೊ, ನಾನೂ ಕುತ್ತಿ ಬನ್ನೆ” ತ ಹೋದವೆ. ಯಾಕೇತೇಳ್ರೆ “ಅಪ್ಪ ನೆಟ್ಟ ಮರಕೆ ನೇಣು ಹಾಕಂಬವೇ” ನಮ್ಮಲ್ಲಿ ಜಾಸ್ತಿ !

ಮತ್ತೆ ದೋಸೆ ಹಿಟ್ಟ್‌ನ ಗದ್ದೆಲಿ ಬೆತ್ತ್‌ನ ಮೇಲೆ ಮಡ್‌ಗುದೂ, ಮೂರು ಸತಿ ಸದ್ದ್ ಮಾಡಿ ಕರ್‌ಯೊದೂ ಸನ ನಮ್ಮ ಪದ್ಧತಿ. ಇದ್‌ಕೆ ಸನ ಒಬ್ಬೊಬ್ಬ ಒಂದೊಂದು ಕತೆ ಬುಟ್ಟವೆ. ಕೆಲವು ಹೇಳವೆ ಅದ್ ಭೂಮಿಗಾಗಿ ಕಾದ್‌ಕಂಡ್ ಕುದ್ದಿರ್‌ವಂತ ಪಾಂಡವ್‌ರ್‌ನ ಕರ್ಯೊದೂತ. ಇನ್ನ್ ಕೆಲವು ಹೇಳವೆ ಅದ್ ಭೂಮಿ ತಾಯಿಗೆ ನೈವೇದ್ಯತ. ಮತ್ತೆ ಕೆಲವರ ಪ್ರಕಾರ ಅದ್ ಕಾವೇರಮ್ಮಂಗೆ ಇಡ್‌ವ ‘ಎಡೆ’. ಹಂಗಾಗಿ “ಬೆತ್ತೋ ಬೆಳೆನೋ ಬೇರೋ ನಾರೋ ಕುಟುಂಬದವೆಲ್ಲಾ ಸೇರಿ ಹಿಟ್ಟ್ ಇಸಿಯೊಳೊ. ಈ ಎಡೆನ ನೀನ್ ಸ್ವೀಕರ್‌ಸಿಕಂಡ್ ನಮ್ಮನ ಕಾಪಾಡೊಕೂ”ತ ಬೇಡಿಕಂಡವೆ. ಇಂತ ‘ಮೌಖಿಕ ಇತಿಹಾಸ’ ಗಳ ಸತ್ಯಾಸತ್ಯತೆ ಏನೇ ಇದ್ದರೂ ಸನ ಕೇಳಿಕಂತೂ ಬಾರೀ ರಸ!

ಮಹಾಭಾರತದ ಕಥೆ ಹೇಳವಂಗೆ ಅಗಸ್ತ್ಯ ಮುನಿಗಳ ಪೂರ್ವಜಂಗ ದೊಡ್ಡ

ಪ್ರಪಾತಲಿ ತಲೆಕೆಳಗಾಗಿ ಜೋತ್ ಬಿದ್ದಿದ್ದೊದ್ದಗಡ. ಅದ್‌ನ ನೋಡಿ ಅಗಸ್ತ್ಯ ಬೇಜಾರ್ ಮಾಡಿಕಂಡ್ ಅದ್‌ರ ಕಾರಣನ ಕೇಳ್‌ದೆ. ಆಗ ಅಗಸ್ತ್ಯ ಮದುವೆ ಆಗದೆ ಹಂಗೇ ಬ್ರಹ್ಮಚಾರಿಯಾಗಿರ್‌ದೇ ಇದ್‌ಕೆ ಕಾರಣಾತ ಪೂರ್ವಜರು ಹೇಳ್‌ವೆ. ಅಂವ ಮದುವೆಯಾಗಿ ಸಂತಾನ ಬೆಳ್‌ಸಿರೆ ಅವಂಗೂ ಒಳ್ಳೆದ್ ಮತ್ತೆ ಪಿತೃಗಳ್‌ಗೂ ಸದ್ಗತಿ ಸಿಕ್ಕಿದೇತ ಹೇಳಿ, ಮದುವೆಯಾಗುವಂಗೆ ಕೋರಿ ಕಂಡವೆ. ಅವರ ಬೇಡಿಕೆಗೆ ಒಪ್ಪಿ ಅಗಸ್ತ್ಯ ಮದುವೆಯಾಕೆ ಮನ್‌ಸ್ ಮಾಡ್‌ದೆ. ಆಗ ಅವಂಗೆ ವಿದರ್ಭ ರಾಜನ ಮಗಳ್‌ನ ಗ್ಯಾನಾದೆ. ಬಾರೀ ಪೊರ್ಲುನ ಗೂಡೆ 'ಲೋಪಮುದ್ರೆ' ಇವನ ಅನುಗ್ರಹಂದನೇ ಆ ರಾಜಂಗೆ ಹುಟ್ಟಿತ್ತ್. ಅವನತ್ರ ಹೋಗಿ ಲೋಪಮುದ್ರೆನ ತನ್‌ಗೆ ಮದುವೆ ಮಾಡಿ ಕೊಡಿಕೆ ಕೇಳ್‌ದೆ. ಅಗಸ್ತ್ಯನ ಬೇಡಿಕೆನ ಕೇಳಿ ವಿದರ್ಭ ರಾಜ ತಲೆಸುತ್ತಿ ಬಿದ್ದದೆ. ಅವನ ಹೆಣ್ಣ್ ಕೂಡಾ ಬೇಜಾರ್ ಮಾಡಿಕಂಡ್ ಮರ್ಡಿಕೆ ಸುರುಮಾಡ್ದೆ. ಮಕ್ಕ ಆತ್‌ಲೇತ ಕೊರ್‌ಗಿಕಂಡಿರ್‌ಕನ ದೈವಕೃಪೆಂದ ಹುಟ್ಟಿದ ಅಷ್ಟ್ ಪೊರ್ಲುನ, ಗುಣವಂತೆನ ಕಾಡ್‌ಲಿ ವಾಸ ಮಾಡಿಕಂಡ್, ಗೆಡ್ಡೆ ಗೆಣ್‌ಸ್ ತಿಂದ್‌ಕಂಡ್ ಇರ್‌ವಂತ ಅಗಸ್ತ್ಯ ಮುನಿಗೆ ಕೊಡಿಕೆ ಅವ್‌ಕೆ ಸುತಾರಾಂ ಮನ್‌ಸಿತ್‌ಲೆ. ಕೊಡ್‌ದುಲೇತ ಹೇಳರೆ ಶಾಪ–ಗೀಪ ಕೊಟ್ಟರೇತ ಹೆದ್‌ರಿಕೆ ಬೇರೆ. ಹಂಗೆ ಅವ್ವ–ಅಪ್ಪ ಕೊರ್‌ಗುದರ ನೋಡಿಕೆ ಬೊತ್ತದೆ ತನ್ನನ ಅವಂಗೇ ಕೊಟ್ಟ್ ಮದುವೆ ಮಾಡಿ ಕೊಡಿಕೆ ಲೋಪಾಮುದ್ರೆ ಅವರ್‌ನ ಒತ್ತಾಯಿಸಿದೆ. ವಿಧಿಯಿಲ್ಲದೆ ಅವ್ ಮಗಳ್‌ನ ಅಗಸ್ತ್ಯಂಗೆ ಮದುವೆ ಮಾಡಿ ಕೊಟ್ಟೊ.

ಹಂಗೆ ಅಗಸ್ತ್ಯ–ಲೋಪಾಮುದ್ರೆ ದಂಪತಿಗೆ "ದೃಢಸ್ಯು" ತ ಹೇಳ್‌ವ ಮಂಙ ಹುಟ್ಟಿದೆ. ಸಣ್ಣದಿರ್‌ಕನೇ ಅಂವ ತೂಕದ ಪೂಜಾ ಸಾಮಗ್ರಿಗಳ ಹೊರೆನ ಆಶ್ರಮಕೆ ತಕಂಬಾತಿತ್ತ್‌ಗಡ. ಅದ್‌ರಿಂದಾಗಿ ಅವಂಗೆ 'ಇಧ್ಯವಾಹ' ತೇಳ್ವ ಹೆಸ್‌ರೂ ಇತ್ತ್‌ಗಡ. ಒಟ್ಟಾರೆ ಅಗಸ್ತ್ಯ ಮುನಿ ಪುತ್ರಸಂತಾನ ಪಡ್‌ಕಂಡ್ ಪೂರ್ವಜರಿಗೆ ಸದ್ಗತಿ ಸಿಕ್ಕುವಂಗೆ ಮಾಡ್ತ್‌ಗಡ.

ಒಂದೊಂದ್ ಕಡೆ ನಾವ್‌ಗೆ ಒಂದೊಂದು ಕಥೆ ಕೇಳಿ ಬಂದದೆ. ಸ್ಕಂದ ಪುರಾಣದ "ಶ್ರೀ ಕಾವೇರಿ ಮಹಾತ್ಮಮ್ ಪುರಾಣ"ಲಿ ಕಾವೇರಿ ಹುಟ್ಟಿದ ಕತೆ ಬೇರೆನೇ ಉಟ್ಟ್. ಎಲ್ಲಾ ತರದ ಶಾಸ್ತ್ರಗಳ್‌ನ ತಿಳ್‌ಕಂಡಿದ್ದ 'ಕವೇರ' ತ ಹೇಳ್ವ ಹಾರಂವಂಗೆ ಮಕ್ಕ ಇತ್‌ಲೆ. ಅಂವ ಹೆಣ್ಣ್‌ನೊಟ್ಟಿಗೆ ಸಹ್ಯಾಚಲ ಶ್ರೇಣಿ ಕಡೆಗೆ ಹೋಗಿ ಬ್ರಹ್ಮಗಿರಿ ಬೆಟ್ಟದ ತುದಿಲಿ ಕುದ್‌ಕಂಡ್ ಬ್ರಹ್ಮನ ಕುರ್‌ತಾಗಿ ತಪಸ್ಸ್ ಮಾಡದೆ. ಸಾವಿರಾರ್ ವರ್ಸ ಹಿಂಗೆ ತಪಸ್ಸ್ ಮಾಡಿಕಂಡಿರ್‌ಕನ ಬ್ರಹ್ಮದೇವ ಬ್ರಹ್ಮಗಿರಿಲಿ ಪ್ರತ್ಯಕ್ಷ ಆಗಿ ಎಂತ ವರ ಬೇಕೂತ ಕೇಳ್‌ದೆ. ಕವೇರ ಮಕ್ಕಳ ಫಲನ ಬೇಡಿ ಕಂಡದೆ. "ನಿಂಗೆ ಮಕ್ಕಳ ಯೋಗ ಇಲ್ಲದಿದ್ದರೂ ಸನ ನಿನ್ನ ತಪಸ್ಸ್‌ನ ಮೆಚ್ಚಿ ಒಂದ್ ಹೆಣ್ಣ್‌ಕೂಸ್‌ನ ಅನುಗ್ರಹಿಸಿನೆ. ಅವಳಿಂದ ಧರ್ಮದ ವೃದ್ಧಿಯಾದೆ ಮತ್ತೆ ನಿಂಗೆ ಬಾರೀ ಕೀರ್ತಿ ಸಿಕ್ಕಿದೇ'ತ ಆಶೀರ್ವದಿಸಿದೆ. ಹಂಗೆ 'ಲೋಪಾಮುದ್ರೆ'ನ ಕವೇರ ದಂಪತಿಗಳ್‌ಗೆ ಮಗಳಾಗಿ ಬ್ರಹ್ಮದೇವ ದಯಪಾಲ್‌ಸಿದೊ.

ಈ ಸಂದರ್ಭಲಿ ಲೋಪಾಮುದ್ರೆ ಮುಂದೆ ತಾನ್ ಹೊಳೆಯಾಗಿ ಹರಿಯಕೆ ಅನುಗ್ರಹಿಸೊಕೂತ ಬ್ರಹ್ಮದೇವನ ಕೇಳಿಕಂಡದೆ. ಅದ್‍ಕೆ ಬ್ರಹ್ಮದೇವ ಒಪ್ಪಿ ಆಸೀರ್ವಾದ ಕೊಟ್ಟ್ ಸತ್ಯಲೋಕಕೆ ಹೋದೆ. ಹಂಗೆ ಬ್ರಹ್ಮ ಬಂದ್ ಹೋದ ಕಾರಣಕೆ ಮತ್ತೆ ಬ್ರಹ್ಮರ್ಷಿಗಳ್‍ಗೆ ಆಶ್ರಯ ಕೊಟ್ಟ ಕಾರಣನೂ ಸೇರಿ ಕೊಡಗ್‍ನ 'ಬ್ರಹ್ಮಕ್ಷೇತ್ರ' ತ ಕರ್‍ದವೆ. ಹಂಗೆನೇ ಮತ್ಸ್ಯದೇಶ, ಕ್ರೋಢದೇಶತೇಳ್ವ ಹೆಸ್‍ರೂ ಇತ್ತಗಡ. ಈ ಕ್ರೋಢದೇಶನೇ ಕಡೇಲಿ 'ಕೊಡಗು' ಆತೂತನೂ ಹೇಳ್‍ವೆ.

ಲೋಪಾಮುದ್ರೆಗೆ ಹದ್‍ನಾರ್ ವರ್ಸ ತುಂಬುಕನ ಕವೇರ ಅವಳ್‍ನ ಸ್ತುತಿಸಿದೆ. ತಾನು ಹೊಳೆನ ರೂಪಲಿ ಹರ್‍ಕಂಡ್ ಸಾಗರ ಸೇರಿಕೆ ಮುಂದೆ ಲೋಕದ ಎಲ್ಲಾ ಜನ್‍ರ ಪಾಪನ ಪರಿಹಾರ ಮಾಡ್‍ತಾ ಸಾಗಿನೇತ ಹೆತ್ತವ್‍ಕೆ ಹೇಳ್‍ದೆ. ಈ ಭರವಸೆನ ಕೇಳಿ ಕವೇರ ದಂಪತಿಗಳಿಗೆ ಬಾರೀ ಕುಸಿಯಾಗಿ ತಮ್ಮ ಜನ್ಮ ಸಾರ್ಥಕ ಆತೂತ ಗ್ಯಾನ ಮಾಡಿ ಬಾಹ್ಯರೂಪನ ಬುಟ್ಟು ಸತ್ಯಲೋಕಕೆ ಸೇರಿಕೊಂಡೊ. ಆಮೇಲೆ ಭಾರತದ ಬಡಗ ದಿಕ್ಕಿಂದ ತೆಂಕ ದಿಕ್ಕಿಗೆ ಬಂದ ಅಗಸ್ತ್ಯನ ಲೋಪಾಮುದ್ರೆ ಮದುವೆ ಆದೆಗಡ.

ಹಿಂಗಿರ್‍ಕನ ಒಮ್ಮೆ ಅಗಸ್ತ್ಯ ಮಹಾಮುನಿಗೆ ಅಲ್ಲೇ ಹಕ್ಕಲೆ ಇದ್ದ ಕನ್ನಿಕಾತ ಹೇಳ್‍ವ ಹೊಳೆಲಿ ಮೀಯಕೆ ಆಸೆ ಆತ್. ಅಲ್ಲಿಗೆ ಹೋಕೆ ಮುಂದೆ ಹೆಣ್ಣ್‌ನ ನೀರ್‍ನ ರೂಪಲಿ ಕಮಂಡಲಿಗೆ ತುಂಬ್‍ಸಿ, ತನ್ನ ಶಿಷ್ಯಂದ್‍ರಿಗೆ ನೋಡಿಕಣಿಕೆ ಜಾಗ್ರತೆ ಹೇಳಿ ಹೋದೆ. ಆಗ ಲೋಪಾಮುದ್ರೆ ಗಂಡಂಗೆ " ನೀನ್ ಬಾದು ತಡ ಆದರೆ ನಾನ್ ಜಾಸ್ತಿ ಕಾಯೊದ್‍ಲೆ, ಹೊಳೆಯಾಗಿ ಹರ್‍ಕಂಡ್ ಹೊರಟನೇ' ತ ಎಚ್ಚರಿಕೆ ಕೊಟ್ಟ್ ಕಳ್‍ಸಿದೆ. ಒಪ್ಪಿಕೊಂಡ್ ಹೋದರೂ ಸನ ಅಗಸ್ತ್ಯ ಮೀದು ಬಾಕೆ ತಡ ಮಾಡ್‍ದೆ. ಹಂಗಾಗಿ ಲೋಪಾಮುದ್ರೆಗೆ ಸಿಟ್ಟ್‌ಬಂದ್ ಕಾವೇರಿ ಹೊಳೆಯಾಗಿ ಕಮಂಡಲಂದ ಹೊರಗೆ ಹರ್‍ದದೆ. ಶಿಷ್ಯಂದ್‍ರಿಗೆ ಗಾಬರಿಯಾಗಿ ಅವಳ್‍ನ ತಡಿಯಕೆ ಹೋದವೆ. ಆಗ ಕಾವೇರಿ ಅವ್‍ಕೆ ಕಾಣದಂಗೆ ಅಲ್ಲಿಂದ ಗುಪ್ತಗಾಮಿನಿಯಾಗಿ ಹರ್‍ದ್ ಭಾಗಮಂಡಲ ಮುಟ್ಟ ಬಂದೆ. ಅಷ್ಟರ್‌ಲಿ ಅಗಸ್ತ್ಯ ಮುನಿ ಓಡಿಕಂಡ್ ಬಂದ್ ಹೆಣ್ಣ್‌ನತ್ರ ತನ್ನದ್ ತಪ್ಪಾತೂತ ಒಪ್ಪಿಕಂಡದೆ. "ಸುರೂನಂಗೇ ನೀನ್ ದಯವಿಟ್ಟು ನನ್ನೊಟ್ಟಿಗೆ ಇರೊಕು" ತ ಕೇಳಿಕಂಡದೆ. ಅದ್‍ಕೆ ಕಾವೇರಿ ಒಪ್ಪಿಕಂಡದೆ. ಹಂಗೆ ಅರ್ಧರೂಪಲಿ ಅವನ ಹೆಣ್ಣ್ ಲೋಪಾಮುದ್ರೆ ಆಗಿ, ಇನ್ನರ್ಧ ರೂಪಲಿ ಕವೇರನ ಮಗಳ್ ಕಾವೇರಿಯಾಗಿ ಜಲರೂಪಿಣಿ ಆದೆ. ಹಿಂಗೆ ಭಾಗಮಂಡಲಲಿ ಅಗಸ್ತ್ಯ ಬೇಡಿಕಂಡ ಜಾಗೆಲಿ ಅವನ ಪಾದಗಳ ಗುರ್‍ತ್ ಉಟ್ಟ್. ಇದೇ "ಅಗಸ್ತ್ಯ ಕಟ್ಟೆ".

ತನ್ನ ಕೋರಿಕೆನ ಮನ್ನಿಸಿದ ಕಾವೇರಿಗೆ ಅಗಸ್ತ್ಯ "ನೀನ್ ಹೋಕಾದ ದಾರಿನ ನಾನ್ ತೋರ್‍ಸಿ ಕೊಟ್ಟನೆ. ನೀನ್ ಹೋಗ್‍ವ ದಾರಿಲೆಲ್ಲಾ ಶಿವಲಿಂಗಗಳ್‍ನ ನಾನೇ ಸ್ಥಾಪನೆ ಮಾಡಿನೇತ ಹೇಳ್‍ದೆ. ಹಂಗೆ ತಲಕಾವೇರಿಲಿ ಸನ 'ಅಗಸ್ತ್ಯೇಶ್ವರ ಶಿವಲಿಂಗ' ನ ಅವನೇ ಸ್ಥಾಪನೆ ಮಾಡ್‍ದೆ. ಅಗಸ್ತ್ಯ ಕಾವೇರಿ ಹೋಕಾದ ದಾರಿನ

ಹಿಂಗೆ ಹೇಳಿ ತೋರ್‌ಸಿದೆಗಡ. "ನೀನ್ ಸರ್ವತೀರ್ಥಕೆ ಹೋಗಿ ಅಲ್ಲಿಂದ ಭಾಗಂಡ ಕ್ಷೇತ್ರಕೂ ಮತ್ತೆ ಹೇಮೆನ ಜೊತೆಲಿ ಸಪ್ತಕೋಟೇಶ್ವರ ಕ್ಷೇತ್ರಕೂ ಹೋಗ್. ಕೂಪಸ್ವಾಮಿಯಾದ ಹರನ ನೋಡಿಕೆ ಹರಿಶ್ಚಂದ್ರಕೆ ಹೋಗಿ ಅಲ್ಲಿಂದ ವಲಂಬುರಿಗೆ ಹೋಗಿ ಲವಣೇಶಂಗೆ ಕೈಮುಗ್‌ದ್, ಕೌಬೇರ ದುರ್ಗಕ್ಕೆ ಹೋಗಿ ಅಲ್ಲಿಂದ ಗಜಕ್ಷೇತ್ರಕೆ ಹೋಗ್. ಅಲ್ಲಿಂದ ಹೊರ್‌ಟ್ ಗೋಮುಖಿಗೂ, ಶ್ರೀಪತಿ ಕ್ಷೇತ್ರಕೂ ಭೇಟಿ ಕೊಟ್ಟ್ ಅಲ್ಲಿಂದ ಮಾರ್ಕಂಡೇಯನ ಆಶ್ರಮಕೆ ಹೋಗಿ, ಕಪಿಲನತ್ರ ಹೋಗ್. ತಿರ್‌ಗಿ ಚಂದ್ರಪುಷ್ಕರಣಿಗೆ ಹೋಗಿ, ಶ್ವೇತ ಜಂಬೂಸ್ಥಲ ಸ್ವಾಮಿಯತ್ರ ಹೋಗಿ ಕಡೇಲಿ ನೀನ್ ಸಮುದ್ರನ ಸೇರಿಕ. ನಿನ್ನ ರಕ್ಷಣೆಗಾಗಿ ಮತ್ತೆ ಎಲ್ಲರ ಕಲ್ಯಾಣಕಾಗಿ ನಾನ್ ನಿನ್ನ ಎರ್ಡೂ ದಂಡೆಗಳ್‌ಲಿ ಒಂದೊಂದ್ ಯೋಜನ ದೂರಲಿ ಶಿವಲಿಂಗನ ಸ್ಥಾಪನೆ ಮಾಡಿಕಂಡ್ ನಾನ್ ಮುಂದೆ ಹೋನೆ" ತ ಹೇಳ್‌ದಂಗೆ ಅಗಸ್ತ್ಯ ಮುನಿ ಪೊರ್ಲುನ ಶಿವಲಿಂಗಗಳ್‌ನ ಪ್ರತಿಯೊಂದ್ ಯೋಜನ ದೂರಲಿ ಸ್ಥಾಪಿಸಿಕಂಡ್ ಅವ್‌ಗಳಿಗೆ ಮಾಡಕಾದ ಪೂಜೆಗಳ್‌ನೆಲ್ಲಾ ಲಾಯ್‌ಕಲಿ ವಿಧಿವತ್ತಾಗಿ ಮಾಡಿ ಮುಗ್‌ಸಿ ಮಲಯ ಪರ್ವತಕೆ ಹೋತ್‌ಗಡ.

ಭಾಗಮಂಡಲ ಮುಟ್ಟ ಗುಪ್ತಗಾಮಿನಿಯಾಗಿ ಬಂದ ಕಾವೇರಿ ಅಲ್ಲಿ ಸುಜ್ಯೋತಿ, ಕನ್ನಿಕೆ ಹೊಳೆಗಳೊಟ್ಟಿಗೆ ಸೇರಿ 'ತ್ರಿವೇಣಿ ಸಂಗಮ' ಆದೆ. ಈ ತ್ರಿವೇಣಿ ಸಂಗಮಲಿ ಮೀದರೆ ಜನ್ಮಾಂತರಗಳ ಪಾಪ ಪರಿಹಾರ ಆದೇತ ಭಕ್ತರ್ ನಂಬ್‌ವೆ. ಈ ಸಂಗಮಲಿ ಮೀಯಕೆ ಮುಂದೆ ತಲೆಬೋಳ್‌ಸಿಕಂಡ್ ಸತ್ತ್ ಸ್ವರ್ಗ ಸೇರ್‌ದ ಹಿರಿಯವ್‌ಕೆ ಪಿಂಡ ಹಾಕುವ ಪದ್ಧತಿ ಪಂಡ್ ಕಾಲಂದನೂ ಉಟ್ಟ್. ಹಂಗೆನೆ ಮಕ್ಕಳ ಹುಟ್ಟ್ ಕೂದಲ್‌ನ ತೆಗ್‌ಸಿಕೂ, ಹರಕೆ ತೀರ್‌ಸಿಕೂ ಸನ ಇಲ್ಲಿಗೆ ಬಂದವೆ.

ಮಹಾತಪಸ್ವಿ ಭಗಂಡ ಮುನಿ ಭಾಗಮಂಡಲಲಿ ಭಗಂಡೇಶ್ವರ ಶಿವಲಿಂಗ, ಶ್ರೀ ಮಹಾವಿಷ್ಣು, ಶ್ರೀ ಸುಬ್ರಹ್ಮಣ್ಯ ದೇವರ್‌ಗಳ್‌ನ ಪ್ರತಿಷ್ಠಾಪನೆ ಮಾಡ್ಯುಟು. ಕ್ಷೇತ್ರ ದೇವತೆಗಳಾದ ವಿನಾಯಕ, ಕ್ಷೇತ್ರಪಾಲ, ಶಿವ, ಕುಮಾರಸ್ವಾಮಿ, ಹರಿ, ಪಾರ್ವತಿ, ಕಾವೇರಿ, ಕನಿಕೆ, ದುರ್ಗೆ, ನಾಗದೇವತೆ, ತಕ್ಷಕ ಕೂಡಾ ಇಲ್ಲಿ ನೆಲೆ ನಿತ್ತೊಳೊ. ನಾಗಬನನೂ ಇಲ್ಲಿ ಉಟ್ಟ್.

ಇಷ್ಟೆಲ್ಲಾ ದೇವರುಗ ಇರ್‌ಕನ ಯಾವ ಕ್ರಮಲಿ ನಾವ್ ದರ್ಶನ ಪಡ್‌ದರೆ ಒಳ್ಳೆದಾದೇತ ತಿಳ್‌ದವ್ ಹೇಳ್ಯೊಳೊ. " ತ್ರಿವೇಣಿ ಸಂಗಮಲಿ" ದಂಪತಿ ಸಮೇತ ಮೂರು ಸತಿ ಮುಳ್‌ಗಿ ಎದ್ದ್ ಮೀದಾದ ಮೇಲೆ ಅಲ್ಲೇ ಹೊಳೆಕರೆಲಿರ್‌ವ ಅಶ್ವತ್ಥಮರಕೆ ಮೂರು ಸುತ್ತು ಬರೊಕು. ಅಲ್ಲಿಂದ ಅಗಸ್ತ್ಯ ಕಟ್ಟೆಗೆ ಹೋಗಿ ನಮಸ್ಕಾರ ಮಾಡ್‌ದ ಮೇಲೆ ಶ್ರೀ ಭಗಂಡೇಶ್ವರ ದೇವಸ್ಥಾನಕೆ ಹೋದು ಒಳ್ಳೆದು. ನುಗ್ಗಿದಂಗೆ ಸುರೂಲಿ ಮಹಾಗಣಪತಿಗೆ ಕೈ ಮುಗ್‌ದ್ ಭಗಂಡೇಶ್ವರನ ದರ್ಶನ ಮಾಡ್‌ಕನ ಮಹಾವಿಷ್ಣು ಗುಡಿಗೆ ನಮಸ್ಕಾರ ಮಾಡೊಕು. ಅದಾದ ಮೇಲೆ ಸುಬ್ರಮಣ್ಯನ ದರ್ಶನ ಪಡೆಯೊಕು. ಅಲ್ಲಿಂದ ಸುಬ್ರಮಣ್ಯ ಗುಡಿನ ಎದ್‌ರಿಗೇ ಇರ್‌ವಂತ "ಕಿನುಮಾಣಿ"

ದೈವಗಳಿಗೆ ಕೈ ಮುಗ್‌ದ್ ಕಡೇಲಿ ದೇವಸ್ಥಾನದ ಹೊರಾಂಗಣಲಿರ್‌ವ ಚಾಮುಂಡಿ ದೈವದ ಆಸೀರ್ವಾದ ಪಡ್‌ದರೆ ಶ್ರೇಷ್ಠತ ನಂಬಿಕೆ. ಭಾಗಮಂಡಲಲಿ ದರ್ಶನ ಆದ ಮೇಲೆ ತಲಕಾವೇರಿಗೆ ಹೋಗೇ ಹೋಕು. ಅಲ್ಲಿ ಕಾವೇರಿ ಕುಂಡಿಕೆನ ಹಕ್ಕಲೆ ಇರುವ ಕೊಳಲಿ ಮೀಯೊಕು. ಅಲ್ಲಿ ಪೂಜೆ ಮಾಡ್‌ವ ಹಾರಂವಂಗ ತೀರ್ಥ ಕುಂಡಿಕೆಂದ ತೀರ್ಥನ ಬಿಂದಿಗೆಲಿ ಎತ್ತಿ ತಲೆಮೇಲೆ ಹೊಯ್‌ದವೆ. ಅಲ್ಲೇ ಅವ್ವ ಕಾವೇರಿಗೆ ಕೈ ಮುಗ್‌ದ್ ಬಟ್ಟೆ ಬದ್‌ಲಾಯಿಸಿಕಂಡ್ ಬರೊಕು. ಸುದ್ಧ ಬಟ್ಟೆ ಹಾಕಿ ಬಂದ ಮೇಲೆ ಶ್ರೀ ಮಹಾಗಣಪತಿಗೆ ಅಡ್ಡ ಬೀಳೊಕು. ಅಲ್ಲಿಂದ ಶಾಸ್ತಾವುಗೆ ಕೈಮುಗ್‌ದ್, ಅಗಸ್ತ್ಯೇಶ್ವರಂಗೆ ನಮಸ್ಕಾರ ಮಾಡಿ ಕೆಳಗೆ ಇಳ್‌ದು ಬರೊಕು.

ಕೆಳಗೆ ಇಳ್‌ದಂಗೆ ಅರಳಿ ಮರ ಸಿಕ್ಕಿದೆ. ದೇವರ್‌ನ ಗ್ಯಾನ ಮಾಡಿಕಂಡ್ ಅರಳಿಮರಕೆ ಸುತ್ತ್ ಬರೋಕು. ಅಲ್ಲಿಂದ ಬ್ರಹ್ಮ ಕುಂಡಿಕೆಗೆ ಪ್ರದಕ್ಷಿಣೆ ಬಂದ್, ಅಡ್ಡ ಬಿದ್ದ್ ಬೇಡಿಕಂಡ್, ಬ್ರಹ್ಮಗಿರಿ ಬೆಟ್ಟನ ಹತ್ತೊಕು. ಹಂಗೆ ಹತ್ತ್‌ಕನ ನಾವ್‌ಗೆ ಪರಮಾತ್ಮನ ಸೃಷ್ಟಿನ ಪೊರ್ಲು ಕಂಡ್‌ಬಂದದೆ. ಮೇಲೆ ಹತ್ತಿ ನೋಡ್‌ಕನ ಅಲ್ಲಿ ಋಷಿಗಳ ಏಳು ಕುಂಡಿಕೆಗ ಕಂಡವೆ. ಅದ್‌ನ ನೋಡಿ ಭೂಮಿ ತಾಯ್‌ಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಇಳ್‌ದ್ ಬಂದರೆ "ಕಾವೇರಿ ಪುಣ್ಯ ಯಾತ್ರೆ " ಸಂಪೂರ್ಣ ಆದೇತ ನಂಬಿಕೆ.

ರಾಜ ಚಿಕ್ಕವೀರ ರಾಜೇಂದ್ರನ ಕಾಲಲಿ ಭಾಗಮಂಡಲ ದೇವಸ್ಥಾನದ ತಕ್ಕರಾಗಿ ಬಳ್ಳಡ್ಕ ಕುಟುಂಬಸ್ಥರ್‌ನೂ, ತಲಕಾವೇರಿಲಿ ತಕ್ಕರಾಗಿ ಕೋಡಿ ಕುಟುಂಬಸ್ಥರ್‌ನೂ ನೇಮಿಸಿತ್ತ್‌ಗಡ. ಕಾವೇರಿಗೆ ತೊಡ್‌ಸುವ ಆಭರಣಗಳ ರಕ್ಷಣೆಯ ಜವಾಬ್ದಾರಿನ ಕೋಡಿ ಕುಟುಂಬದವ್‌ಕೆ ಕೊಟ್ಟ್ ಅದ್ಕಾಗಿ ಕೊಟ್ಟಿದ್ದ ಖಡ್ಗ ಈಗಲೂ ಅವರ ಹಕ್ಕಲೆ ಉಟ್ಟ್, ತಕ್ಕರೆಲ್ಲಾ ಸೇರಿ ಅಕ್ಟೋಬರ್ 4 ರಂದ್ 'ಆಜ್ಞಾಮೂರ್ತ' (ಆಜ್ಞಾ ಮುಹೂರ್ತ) ಮಾಡ್‌ವೆ. ಆಗ ಒಂದ್ ತಿಂಗಳ ಕಾಲ "ದೇಸ ಕಟ್" ಹಾಕ್‌ವೆ. ಆ ಸಮಯಲಿ ಕೊಡ್‌ಗ್‌ನ ವ್ಯಾಪ್ತಿಲಿ ಮರ ಕತ್ತ್‌ರ್‌ಸುದಾಗಲೀ, ಜೀವಹಾನಿ ಮಾಡ್‌ದಾಗಲೀ, ಪ್ರಾಣಿಗಳ್‌ನ ಕೊಲ್ಲುದಾಗಲೀ ಮಾಡಿಕಾಗದು. ಹಂಗೇನಾದರೂ ಅಪ್ಪಿತಪ್ಪಿ ಗೊತ್ತಿಲ್ಲದೆ ಮಾಡ್‌ರೂ ಸನ 'ತಪ್ಪು ಹಣ'ನ ದೇವಸ್ಥಾನಕೆ ಕಟ್ಟಿ ಪ್ರಾಯಶ್ಚಿತ್ತ ಮಾಡಿಕಣೊಕು.

ಅವ್ವ ಕಾವೇರಿ ಭಾಗಮಂಡಲದ ತ್ರಿವೇಣಿ ಸಂಗಮದ ಮೂಡ್‌ದಿಕ್ಕಲಿ ಲೋಕ ಕಲ್ಯಾಣಕ್ಕಾಗಿ ಹೊರ್‌ಟ್ ಕರ್ನಾಟಕ ಮತ್ತೆ ತಮಿಳ್‌ನಾಡಿನವ್‌ಕೆ ನೀರ್ ಉಣ್‌ಸಿ, ಕಡೇಲಿ ತಮಿಳ್‌ನಾಡ್‌ನ 'ಪೂಂ ಪಟ್ಟಣ' ಲಿ ಬಂಗಾಳಕೊಲ್ಲೀತ ಹೇಳ್‌ವ ಸಾಗರನ ಸೇರ್‌ದೆ. ಹಂಗಾಗಿ ಸಂಕ್ರಮಣಲಿ ತಮಿಳ್‌ನಾಡ್‌ಂದ ಭಕ್ತರ ಗುಂಪೇ ಇಲ್ಲಿಗೆ ಶರಣು ಬಂದವೆ. ಪುಣ್ಯ ತೀರ್ಥರೂಪಿಣಿಯಾದ ಅವ್ವ ಕಾವೇರಿ ಎಲ್ಲರ್‌ನ ಕರುಣೆಲಿ ಕಾಪಾಡಿಕಂಡ್‌ರ್‌ಲಿ.





# ಎರ್ಡನೇ ಕಾವೇರಿ ಕ್ಷೇತ್ರ ಬಲಮುರಿ

ಅವ್ವ ಕಾವೇರಿ ಕೊಡ್‌ಗ್‌ನ ಕುಲದೇವತೆ. ತಲಕಾವೇರಿಲಿ ಕಾವೇರಿ ನೆಲೆ ನಿತ್ತರೂ ಸನ "ಎರ್‌ಡನೇ ಕಾವೇರಿ ಕ್ಷೇತ್ರ " ತ ಹೇಳ್‌ದು ಮೂರ್ನಾಡ್‌ನ ಹಕ್ಕಲೆ ಇರ್‌ವ 'ಬಲಮುರಿ ' ಅಥವಾ 'ಬಲಂಬೇರಿ' ಕ್ಷೇತ್ರನ. ಶ್ರೀ ತಲಕಾವೇರಿಲಿ ತೀರ್ಥೋದ್ಭವ ಆದ ಮಾರ್‌ನೆ ದಿನ ಬಲಮುರಿಲಿ ಕಾವೇರಿನ ಆರಾಧನೆ ಪ್ರತಿ ವರ್ಸನೂ ನಡ್‌ದದೆ. ಮಹಾಪೂಜೆನೊಟ್ಟಿಗೆ ಅನ್ನಸಂತರ್ಪಣೆ ಸನ ಇದ್ದದೆ. ನೂರಾರ್ ಭಕ್ತಂಗ ಬಲಮುರಿಗೆ ಬಂದ್, ಕಾವೇರಿಗೆ ಅಡ್ಡ ಬಿದ್ದವೆ.

ಕಾವೇರಿನ "ಅನುಗ್ರಹ ಭೂಮಿ" ತ ಹೇಳ್‌ವ ಬಲಮುರಿಲಿ ಐತಿಹಾಸಿಕ ಹಿನ್ನೆಲೆ ಇರ್‌ವ ಅಗಸ್ತ್ಯೇಶ್ವರ ಮತ್ತೆ ಕಣ್ವ ಮುನೀಶ್ವರ ದೇವಸ್ಥಾನಗ ಸನ ಒಳೊ. ಬಲಮುರಿ ಗ್ರಾಮಸ್ಥರ್ ಮಾತ್ರ ಅಲ್ಲದೆ ಸುತ್ತ ಮುತ್ತಲ್‌ನ ಗ್ರಾಮಗಳಾದ ಕೈಕಾಡು, ಬಾವಲಿ, ಕೊಣಂಜಗೇರಿ, ಬೇತ್ರಿ, ಕಿರುಂದಾಡು, ಕಣ್ಣಬಲಮುರಿ, ಹೊದ್ದೂರು, ವಾಟೆಕಾಡು, ಮೂರ್ನಾಡು ಮತ್ತೆ ಕೊಡ್‌ಗ್‌ನ ಬೇರೆ ಬೇರೆ ಕಡೆಂದ ಭಕ್ತಂಗ ಬಂದ್ ಸೇರ್‌ವೆ. ಕಾವೇರಿ ಸನ್ನಿಧಿಲಿ ಮೀದ್, ತೀರಿಕಂಡವ್‌ಕೆ ಪಿಂಡ ಹಾಕಿ, ಕಣ್ವ ಮುನೀಶ್ವರ ದೇವಸ್ಥಾನಲಿ ಪೂಜೆ ಮಾಡ್‌ವೆ. ಮತ್ತೆ ಕಾವೇರಿ ಹೊಳೆನ ಬಲ್‌ದ ದಂಡೆಲಿರ್‌ವ ಅಗಸ್ತ್ಯೇಶ್ವರಂಗೆ ಪೂಜೆ ಸಲ್ಲಿಸಿ ಧನ್ಯರಾದವೆ. ವರ್ಸೋಳ್ ಇಲ್ಲಿನ ಒಂದೊಂದು ಕುಟುಂಬದವ್ ಇಲ್ಲಿ ಅನ್ನದಾನ ಮಾಡ್‌ವೆ. ಬಂದ ಭಕ್ತಂಗ ಇದ್‌ನ ಮಹಾ ಪ್ರಸಾದಾತ ಸ್ವೀಕಾರ ಮಾಡ್‌ವೆ. ತಲಕಾವೇರಿಲಿ ಜಾತ್ರೆ ನಡ್‌ಯುವಂಗೆ ಇಲ್ಲೂ ಸಣ್ಣ ಪ್ರಮಾಣಲಿ ಜಾತ್ರೆ ನಡ್‌ದದೆ. ಮರದ ಬುಡಲಿ ಕುದ್‌ಕಂಡ ಬಳೆಗಾರಂಗೆ ಹೆಣ್ಣ್‌ಜನ ಕೈನ ಒಡ್ಡಿ ಬಳೆ ಹಾಕ್‌ಸಿಕಂಬದು ಸಂಪ್ರದಾಯ.

ಬಲಮುರಿನ ಕಾವೇರಿ ಕ್ಷೇತ್ರಕ್ಕೆ ಅದ್‌ರದೇ ಆದ ಪೌರಾಣಿಕ ಮತ್ತೆ ಚಾರಿತ್ರಿಕ ಹಿನ್ನೆಲೆ ಉಟ್ಟ್. ಹಿಂದೆ ನೆರಿಗೆ ಮಾಡ್‌ವ ವಿಸೇಸ ಉಡುಗೆ ಆಗಿರ್‌ವ ಕೊಡವ ಸೀರೆಗೂ ಇದೇ ಕ್ಷೇತ್ರ ಸಾಕ್ಷಿಯಾವ್‌ಟು. ರಾಜ ದೇವವರ್ಮನ ಆಡಳಿತದ ಕಾಲಲಿ ಗಂಡ ಅಗಸ್ತ್ಯೇಶ್ವರನ ಕಮಂಡಲಂದ ಧುಮ್‌ಕಿ ಲೋಕಕಲ್ಯಾಣಕೆ ಹೊರ್‌ಟವಳೇ ಕಾವೇರಿ. ಭಾಗಮಂಡಲದ ಸಂಗಮಕೆ ಮುಟ್ಟ ಗುಪ್ತಗಾಮಿನಿಯಾಗಿ ಯಾರಿಗೂ ಕಾಣದಂಗೆ ಹರ್‌ದ್ ಬಂದ್, ಅಲ್ಲಿ ಕನ್ನಿಕೆನೊಟ್ಟಿಗೆ ಸೇರಿ ಪಾಲೂರು (ಹರಿಶ್ಚಂದ್ರ) ಕಡೆಗೆ ಹರ್‌ದದೆ. ಗಂಡ ಹಿಂಬಾಲಿಸ್‌ಕಂಡ್ ಬರ್‍ತಾ ಉಟ್ಟೂತ ಕಾವೇರಿಗೆ ಗೊತ್ತಾದೆ. ಹಂಗಾಗಿ ಅವ್‌ಳ್ ಹರಿಶ್ಚಂದ್ರದ ಜನರ್‌ನ ಹರ್‌ಸಿ ಇನ್ನೂ ಮುಂದೆ ಹೋದೆ. ಅದ್‌ರಿಂದಾಗಿ ತಲಕಾವೇರಿ ತೀರ್ಥೋದ್ಭವದ ಮಾರನೆ ದಿನ ಬಲಮುರಿಲಿ ನಡಿವಂಗೆ ಪಾಲೂರ್‌ನ ಹರಿಶ್ಚಂದ್ರಲೂ ಕುಲದೇವಿನ ಆರಾಧನೆ ನಡ್‌ದದೆ.

ಕಾವೇರಿ ಹೊಳೆಯಾಗಿ ಬಲಮುರಿಗೆ ಬಾವಂತ ವಿಸ್ಯ ಕಾವೇರಿನ ಭಕ್ತನಾಗಿದ್ದ ಚಂದ್ರವರ್ಮ ರಾಜನ ಮಂಜ ದೇವಕಾಂತಂಗೆ ಗೊತ್ತಾದೆ. ಅವಂಗೆ ಕಾವೇರಿ ಕನ್‌ಸ್‌ಲಿ ಬಂದ್ "ನೀನ್ ನಿನ್ನ ಪರಿವಾರದೊಟ್ಟಿಗೆ ಬಲಮುರಿಲಿ ಬಂದ್ ಕಾದ್‌ಕಂಡಿರ್. ನಾನ್ ಅಲ್ಲಿಗೆ ಬಂದ್ ನಿಂಗೆ ದರ್ಶನ ಕೊಟ್ಟನೇ"ತ ಹೇಳಿದ್ದದೆ. ಹಂಗಾಗಿ ದೇವಕಾಂತ ರಾಜನ ಪರಿವಾರದವು ಕಾವೇರಿನ ನೋಡಿಕೆ ಒಂದ್ ಕಡೆಂದ ಓಡಿಕಂಡ್ ಬಂದವೆ. ಆ ಜಾಗೆನ ಈಗೊಳೂ " ಓಟಂಬಲ" ತ ಕರ್‌ದವೆ. ಕಾವೇರಿ ಹೇಳ್‌ದಂಗೆ ರಾಜಪರಿವಾರದವ್‌ಕೆ ತನ್ನ ನಿಜರೂಪಲಿ ದೇವಿಯಾಗಿ ಪ್ರತ್ಯಕ್ಷಳಾಗಿ ಹರ್‌ಸಿದೆ. ಅದ್‌ಕೆ ಬಲಮುರಿನ 'ಅನುಗ್ರಹ ಭೂಮಿ' ತ ಹೇಳ್‌ವೆ.

ಅಷ್ಟರ್‌ಲಿ ಹೆಣ್ಣ್‌ನ ಹಿಂಬಾಲಿಸ್‌ಕಂಡ್ ಬಂದ ಅಗಸ್ತ್ಯ ಮುನಿ ಕಾವೇರಿನ ಹೋಗದಂಗೆ ತಡ್‌ದದೆ. ಕಾವೇರಿ ಇದ್‌ಕೆ ಒಪ್ಪದೆ ಮುಂದೆ ಹೋದೆ. ಆಗ ರಾಜಪರಿವಾರದ ಹೆಣ್ಣ್‌ಮಕ್ಕಳ ಗುಂಪು ಹೊಳೆಗೆ ಅಡ್ಡಲಾಗಿ ನಿತ್ತ್‌ಕಂಡ್ ಅವ್ವ ಕಾವೇರಿನ ಹೋಗದಂಗೆ ತಡ್‌ದವೆ. ಕಾವೇರಿ ಕಟ್ಟೆನ ಬಲ್‌ದಬದಿಗೆ ಹರ್‌ದದೆ. ಈ ನೀರ್‌ನ ರಭಸಕೆ ಅವು ಉಟ್ಟ್‌ಕಂಡಿದ್ದ ಸೀರೆನ ನೆರಿಗೆಗ ಹಿಂದಕೆ ತಿರ್‌ಗುವೆ. ನೀರ್‌ಲಿ ಸೀರೆ ಕೊಚ್ಚಿ ಹೋಗದಂಗೆ ಸೀರೆನ ಬಲಭುಜಕೆ ಕಟ್ಟಿಕಂಡವೆ. ಆಗ ಕಾವೇರಿ ತನ್ನನ ತಡ್‌ದ ಹೆಣ್‌ಜನಕೆ "ನೀವ್ ಯಾಗೋಳು ಹಿಂಗೆನೇ ಸೀರೆ ಉಟ್ಟ್‌ಕಂಡಿರಿ, ಬೇರೆ ಯಾರ್‌ಗೂ ಈ ತರದ ಉಡುಪು ಇಲ್ಲೆ. ನೀವ್‌ಗೆ ವರ್ಸೋಳು ಬಂದ್ ಆಸೀರ್ವಾದ ಮಾಡಿ ಹೋದನೆ" ತ ಹೇಳ್‌ದೆ.

ಆಗ ರಾಜ ದೇವಕಾಂತ ಅವ್ವ ಕಾವೇರಿನ ಅವರ ಕುಲದೇವಿಯಾಕೂತ ಬೇಡಿಕಂಡದೆ. ಸೂರ್ಯ-ಚಂದ್ರ ಇರಿಕೆ ಮುಟ್ಟ ಅವರ ಕುಲನ ಉದ್ಧಾರ ಮಾಡೊಕೂತ ಸಾಷ್ಟಾಂಗ ಬಿದ್ದ್ ಕೋರಿಕಂಡದೆ. ಕಾವೇರಿ ಇದ್‌ಕೆ ಒಪ್ಪಿಕಂಡ್

ಅವ್ರ ಕುಲದೇವಿಯಾದೆ. ಹಂಗೇ ಶಿವನ ಸನ ಭಕ್ತಿಲಿ ಪೂಜಿಸಿಕಂಡ್ ಬಂದರೆ ರಾಜವಂಶದ ವೃದ್ಧಿ ಆದೇತನೂ ಹೇಳ್‌ದೆ. ಹಂಗಾಗಿ ಕಾವೇರಿ ಮಾತೆ ಕೊಡ್‌ಗ್‌ನ ಕುಲದೇವತೆ ಆಗಿಯೂ ಪಾಡಿ ಇಗ್ಗುತಪ್ಪ ಕೊಡ್‌ಗ್‌ನ ಆರಾಧ್ಯ ದೈವವಾಗಿಯೂ ಇಲ್ಲಿ ನೆಲೆನಿತ್ತೊಳೊ. ಹೆಚ್ಚಾಗಿ ಕೃಷಿನೇ ನಂಬಿಕಂಡಿರ್‌ವ ಕೊಡ್‌ಗ್‌ನ ಜನಕೆ "ಮಳೆ ದೇವರು"ತ ಹೇಳ್‌ವ ಶ್ರೀ ಪಾಡಿ ಇಗ್ಗುತಪ್ಪನ ಬೇಡಿಕಂಡರೆ ಸರಿಯಾದ ಸಮಯಲಿ ಮಳೆ–ಬೆಳೆನ ಕೊಟ್ಟ್ ಕಾಪಾಡಿಕಂಡ್ ಬಂದದೇತ ನಂಬಿಕೆ.

ಇದಾದ ಮೇಲೆ ರಾಜಪರಿವಾರದವ್ ತಲಕಾವೇರಿಲಿ ಪೂಜೆ ಮಾಡಿಕೆ ಪುರಾಣ ಶಾಸ್ತ್ರ– ತತ್ವಗಳ್‌ನ ಸರಿಯಾಗಿ ತಿಳ್‌ಕಂಡಿರುವಂತ ಹಾರಂವನ ತೋರ್‌ಸಿ ಕೊಡಿಕೆ ದೇವಿ ಕಾವೇರಿನೇ ಕೇಳಿಕಂಡವೆ. ಆಗ ಕಾವೇರಿ ತನ್ನ ಅಪ್ಪ ಕವೇರನ ಸಿನೇತನೂ, ಕಾವೇರಿನ ಭಕ್ತನೂ ಆದ ತಪಸ್ಸ್ ಮಾಡಿಕಂಡಿದ್ದ ಹಾರಂವನ ತೋರ್‌ಸಿಕೊಟ್ಟ್ ಅವನ ಮೂಲಕ ಪೂಜೆ ಮಾಡ್‌ಸಿಕಂಡ್ ಬಂದರೆ ಎಲ್ಲಾ ಒಳ್ಳೆದಾದೇತ ಭರವಸೆ ಕೊಟ್ಟದೆ. ಹಂಗಾಗಿ ರಾಜ ದೇವಕಾಂತ ತನ್ನ ಪರಿವಾರ ಸಮೇತ ಬಲಮುರಿಂದ ತಲಕಾವೇರಿಗೆ ಹೋಗಿ ತಪಸ್ವಿ ಹಾರಂವನ ಕೈಲಿ ಕಾವೇರಿನ ಪೂಜೆ ಮಾಡ್‌ಸಿಕೆ ಸುರುಮಾಡ್‌ದೆ. ಒಂದು ತಿಂಗ ಮುಟ್ಟ ತಲಕಾವೇರಿಲೇ ಇದ್ದ್ ಅಗಸ್ತ್ಯೇಶ್ವರನ ಮತ್ತೆ ಅವ್ವ ಕಾವೇರಿನ ಪೂಜೆ ಮಾಡಿ ಎಲ್ಲಾ ತರಲಿ ವೃದ್ಧಿನ ಕಂಡದೆ. ರಾಜ ದೇವಕಾಂತ ಕಾವೇರಿ ಪೂಜೆಗೆ ಒಂದ್ ವರ್ಸಕಾಗುವಷ್ಟ್ ದುಡ್ಡ್–ಕಾಸ್ ವ್ಯವಸ್ಥೆನೂ ಮಾಡಿ ಕೊಟ್ಟ್, ವರ್ಸೋಳು ತಲಕಾವೇರಿಗೆ ಹೋಗಿ ಪುಣ್ಯಸ್ನಾನ ಮಾಡ್‌ತಿತ್ತ್‌ಗಡ.

ಪುರಾತನ ಕಾಲಲಿ ಬಲಮುರಿ ಹೊಳೆನ ಒಂದ್ ದಡಲಿ ಶಿವನ ಪೂಜೆನೂ ಇನ್ನೊಂದ್ ದಡಲಿ ವಿಷ್ಣುನ ಪೂಜೆನೂ ನಡಿಯತಿತ್ತ್‌ಗಡ. ಬಲಮುರಿನ ಎಡ್‌ದ ದಂಡೆಲಿ ಕಣ್ವ ಮುನೀಶ್ವರ ದೇವಸ್ಥಾನ ಉಟ್ಟ್. ಕಾವೇರಿ ಜಲರೂಪಿಣಿಯಾಗಿ ಬಾಕನ ಕಣ್ವಮುನಿ ಇಲ್ಲಿ ತಪಸ್ ಮಾಡಿಕಂಡ್ ಕುದ್ದಿತ್‌ಗಡ. ಹೊಳೆಲಿ ಮೀದಂಗೆ ಭಕ್ತಂಗ ಸುರೂನ ಪೂಜೆಗೆ ಇಲ್ಲಿಗೇ ಬಂದವೆ. ಅಗಸ್ತ್ಯೇಶ್ವರ ಬಲಮುರಿನ ಬಲ್‌ದ ದಂಡೆಲಿ ಶಿವಲಿಂಗ ಸ್ಥಾಪಿಸಿ ಪೂಜೆ ಮಾಡಿದ್ದದೆ. ಇದೇ ಅಗಸ್ತ್ಯೇಶ್ವರ ದೇವಸ್ಥಾನ. ಇಲ್ಲಿ ಪೂಜೆ ಮಾಡ್‌ರೆ ಇಷ್ಟಾರ್ಥ ಸಿದ್ಧಿಯಾದೇತ ನಂಬಿಕೆ. ಹುತ್ತರಿ ಹಬ್ಬದಂದ್ ಊರ್‌ಜನ ಹೊಸ ಭತ್ತದ ಕದ್‌ರ್‌ನ ಇಲ್ಲಿಗೆ ತಂದ್ ಪೂಜೆ ಮಾಡಿ ಮನೆಲಿ ಕಟ್ಟ್‌ದ್ ಸಂಪ್ರದಾಯ. ಇಲ್ಲಿ ಜಾತಿ–ಮತದ ಭೇದ ಇಲ್ಲದೆ ಜನ ಸೇರ್‌ವೆ.

ಬಲಮುರಿಗೆ ಪಂಡ್‌ಕಾಲಲಿ "ಒಲಂಪುರಿ" ತ ಹೆಸ್ರು ಇತ್ತ್‌ಗಡ. ಕಾವೇರಿನ ತಡ್‌ದ ಸಮಯಲಿ ಕಾವೇರಿ ಬಲ್‌ದ ಬದಿಗೆ ತಿರ್‌ಗಿ ಸುತ್ತ್ ಹಾಕಿ ಹೋದಕೆ 'ಬಲಮುರಿ' (ಕೊಡವ ಬಾಸೆಲಿ ಬಲಂಬೇರಿ) ತ ಹೆಸ್ರು ಬಾತ್‌ಗಡ. ಬಲಮುರಿಂದ ಹೊರ್‌ಟ ಕಾವೇರಿ 'ಉಪ್ಪು ಗುಂಡಿ' ತೇಳ್‌ವಲ್ಲಿ ಈಶ್ವರ ದೇವಸ್ಥಾನನ ( ಲವಣೇಶ್ವರ ಮುನಿ ತಪಸ್ಸ್ ಮಾಡ್‌ತಿದ್ದ ಜಾಗೆ) ಸುತ್ತ್ ಹಾಕಿ ಗುಹ್ಯದ ಕಡೆಗೆ ಹೋದೆ.

ಕಾವೇರಿನ ಬುಡದ ಹಿಂಬಾಲ್‌ಸಿದ ಅಗಸ್ತ್ಯ ಮುನಿ ' ಗುಹ್ಯ' ತೇಳ್‌ವಲ್ಲಿ ಅವಳ್‌ನ ಒಲ್‌ಸಿಕಣಿಕೆ ಪ್ರಯತ್ನ ಮಾಡ್‌ದೆ. ಆಗ ಅಲ್ಲಿ ಒಂದ್ ಆಲದ ಮರ ಸದ್ದ್ ಮಾಡಿ ಅವನ ಏಕಾಂತಕೆ ಭಂಗ ತಂದವೆ. ಸಿಟ್ಟ್ ಬಂದ ಮುನಿ ಮುಂದೆ ಆ ಮರ ಸದ್ದೇ ಮಾಡಿಕೆ ಆಗದಂಗೆ ಶಾಪ ಕೊಟ್ಟದೆ. ಹಂಗಾಗಿ ಇಲ್ಲಿರ್‌ನ ಆಲದ ಮರ ಎಷ್ಟ್ ಗಾಳಿ ಬಂದರೂ ಸನ ಸದ್ದ್–ಸುದ್ದಿ ಮಾಡ್‌ದುಲೆಗಡ. ಈ ಜಾಗೆಲಿರುವ ಆಗಸ್ತ್ಯೇಶ್ವರ ದೇವಸ್ಥಾನಲೂ ಬಲಮುರಿಲಿ ನಡೆವಂದೇ ಕಿರ್‌ಸಂಕ್ರಮಣ ಜಾತ್ರೆ ನಡ್‌ದದೆ.





# ಕ್ರಾಂತಿ ವೀರ ಗುಡ್ಡೆಮನೆ ಅಪ್ಪಯ್ಯಗೌಡ

ನಮ್ಮ ಭಾರತ ದೇಸ ಸ್ವಾತಂತ್ರ್ಯ ಪಡಿಯಕೆ ಅದೆಷ್ಟೋ ದೇಸಭಕ್ತಂಗ ಪ್ರಾಣ ಕೊಟ್ಟೊಳೊ. ಗೌಡ ಜನಾಂಗಲಿ ಸನ ಇಂತ ಅನೇಕ ಸೂರಂಗ ಹೋರಾಡಿ ಇತಿಹಾಸ ಆದೊ. ಅದ್‌ರ್‌ಲಿ ಬ್ರಿಟಿಷರ ವಿರುದ್ಧ ನಡ್‌ದ ಹೋರಾಟಾತ ಕರ್‌ಯುವ 1837 ರ 'ಅಮರ ಸುಳ್ಯ ಕಾಟ್‌ಕಾಯಿ' ಅಥವಾ "ಕೊಡಗು ಕೆನ ರಾ ಬಂಡಾಯ" ತೇಳ್‌ದ್ ಬಾರೀ ಪ್ರಾಮುಖ್ಯತೆ ಪಡ್‌ಕಂಡುಟು. ಅದ್‌ರ್‌ಲಿ ಗುಡ್ಡೆಮನೆ ಅಪ್ಪಯ್ಯಗೌಡ್ರ ಪಾತ್ರ ಬಾರೀ ದೊಡ್ಡದ್.

ಕೊಡ್‌ಗ್‌ನ ಮೂರ್ನಾಡ್ ಹಕ್ಕಲೆ ಇರ್‌ವ ಬಲಮುರಿ ಗ್ರಾಮದ ಗುಡ್ಡೆ ಮನೆಯವು ಸುಳ್ಯದ ಮಾಗಣೆ ಕಡೆಂದತೇಳ್ರೆ ಮೇಲ್‌ನ ಕೊಡ್‌ಗ್‌ನ ಕಡೆಂದ ಬಂದ್ ಕೊಡ್‌ಗ್‌ಲಿ ಜಮ್ಮಾ ಪಡ್ದ್ ವಾಸ ಇದ್ದೊಗಡ. ಈ ಗುಡ್ಡೆಮನೆಲಿ ಸುಬ್ಬಪ್ಪ ಗೌಡರ ಮಂಜನಾಗಿ ಅಪ್ಪಯ್ಯಗೌಡ ಹುಟ್ಟಿದೊ. ಇವ್‌ಕೆ 3 ಜನ ತಮ್ಮಂದಿರೂ ಇದ್ದೊ. ಅದರ್‌ಲೊಬ್ಬ ತಮ್ಮಯ್ಯಗೌಡ, ಅವೂ ಸನ 'ಅಮರ ಸುಳ್ಯ ಕಾಟಕಾಯಿ'ಲಿ ಹೋರಾಡಿ ಶಿಕ್ಷೆ ಅನುಭವಿಸಿದ್ದೊ. ಚಿಕ್ಕವೀರ ರಾಜೇಂದ್ರನ ಕಾಲಲಿ ಅಪ್ಪಯ್ಯಗೌಡ್ರು ಜಮೇದಾರರಾಗಿದ್ದೊ. ಯಾಗ ಕೊಡಗು ಬ್ರಿಟಿಷರ ಆಡಳಿತಕೆ ಸಿಕ್ಕಿತೋ ಅವ್ ಸುಳ್ಯದ ಸುಬೇದಾರ ಆದೊ. ಹಂಗೆ 'ಸುಬೇದಾರ' ಆಗಿದ್ದರೂ ಸನ ಅವ್‌ಕೆ ಬ್ರಿಟಿಷರ ದಬ್ಬಾಳಿಕೆ ಚೂರು ಸನ ಹಿಡಿಸ್‌ತಿತ್‌ಲೆ.

ಹಂಗಾಗಿ ಇವು ನಮ್ಮ ದೇಸನ ಸ್ವತಂತ್ರಗೊಳಿಸುವಂತ ಹೋರಾಟ ಮಾಡಿಕೆ ನಿರ್ಧರಿಸಿದೊ. ಹಂಗೆ ಇವು ಬ್ರಿಟಿಷರ ಆಡಳಿತನ ಧಿಕ್ಕರ್‌ಸಿ ತನ್ನ ಜೊತೆಗಾರರೊಟ್ಟಿಗೆ ಸೇರಿ ಮಾಡ್‌ದಂತ ಹೋರಾಟಲಿ ಅಪ್ಪಯ್ಯಗೌಡರೊಟ್ಟಿಗೆ ಕೆದಂಬಾಡಿ ರಾಮೇಗೌಡ, ಹುಲಿಕುಂದ ನಂಜಯ್ಯ ಮುಖ್ಯವಾಗಿದ್ದೊ.

ಕೊಡ್‌ಗ್‌ನ ರಾಜ ಚಿಕ್ಕವೀರ ರಾಜೇಂದ್ರನ ದಿವಾನ ಆಗಿದ್ದ ಬೋಪು ದಿವಾನ, ಸುಬೇದಾರ ಬಿದ್ದಯ್ಯ, ಅಪ್ಪಯ್ಯ, ದೊಡ್ಡಯ್ಯ, ಬೋಪಣ್ಣ ಮತ್ತೆ ಕೆಲವು ಜನ್‌ರ ಕುತಂತ್ರಂದಾಗಿ ಬ್ರಿಟಿಷ್‌ನವು ನಾಕ್‌ನಾಡ್ (ನಾಲ್ಕುನಾಡು) ಅರಮನೆಲಿದ್ದ ರಾಜನ ಸೆರೆ ಹಿಡ್‌ದೊ. ರಾಜನ ಅಲ್ಲಿಂದ ಎಳ್ಕೊಂಡೋಗಿ ವೆಲ್ಲೂರ್‌ಲಿ ಸೆರೆಲಿಟ್ಟ ಮೇಲೆ 1834 ರ್‌ಲಿ ಕೊಡ್‌ಗ್ ಸಂಪೂರ್ಣಾಗಿ ಬ್ರಿಟಿಷರ ಆಡಳಿತಕೆ ಬಾತ್.

ಇದ್‌ಕೆ ಮುಂದೆ ಸುಳ್ಯ, ಪುತ್ತೂರು, ಬೆಳ್ಳಾರೆ ಎಲ್ಲಾ ಕೊಡ್‌ಗ್‌ಗೇ ಸೇರಿ ಕಂಡಿತ್ತ್. ಈ ಜನಸಕ್ತಿನ ಕಮ್ಮಿ ಮಾಡಿಕೆ ಬ್ರಿಟಿಷ್‌ನವು ಸುರೂಲಿ ಮಾಡ್‌ದ ಉಪಾಯತೇಳ್ರೆ 1834 ರ ಅಕ್ಟೋಬರ್‌ಲಿ ಈ ಮೂರು ಸೀಮೆಗಳ್‌ನ ದಕ್ಷಿಣ ಕನ್ನಡ ಜಿಲ್ಲೆಗೆ ಸೇರ್‌ಸಿದೊ. ಅಲ್ಲಿಂದ ರೈತರ ಮೇಲೆ ಹೊಸ ಕಂದಾಯ ಸುರು ಮಾಡ್‌ದೊ. ಜನಗ ದಂಗೆ ಏಳುವೋತ ಹೆದ್‌ರಿಕೆಲಿ ಕೊಡ್‌ಗ್‌ನ ರಾಜನ ಸೆರೆಹಿಡ್‌ದ್ ಇಟ್ಟಿದ್ದರ ಜನಕೆಲ್ಲಾ ಗೊತ್ತಾಗದಂಗೆ ಗುಟ್ಟಾಗಿಟ್ಟಿದ್ದೊ. ಜನಗ ಮುಂದೆ ಕಂದಾಯನ ಅಕ್ಕಿ ಭತ್ತದ ರೂಪಲಿ ಕೊಡ್ತಿದ್ದೊ. ಮತ್ತೆ ದುಡ್ಡ್‌ನ ರೂಪಲಿ ಕೊಡೊಕೂತ ಹೇಳ್ದೊ. ಕೊಡ್‌ಗ್‌ನ ರಾಜನ ಮೇಲೆ ಇದ್ದ ಪ್ರೀತಿ, ಮತ್ತೆ ಬ್ರಿಟಿಷರ ಒಡ್‌ದ್ ಆಳ್‌ವ ರೀತಿಗೆ ಬೇಜಾರಾಗಿ ಕಂದಾಯನ ಪ್ರತಿಭಟಿಸಿಕಾಗಿ ಜನ ಬಂಡಾಯ ಎದ್ದೊ.

ಚಿಕ್ಕವೀರ ರಾಜೇಂದ್ರನ ಸೆರೆಲಿಟ್ಟ ಮೇಲೆ ಸ್ವಾಮಿ ಅಪರಂಪಾರ ಮತ್ತೆ ಕಲ್ಯಾಣ ಸ್ವಾಮಿತೇಳ್‌ವವು ಬ್ರಿಟಿಷರ ವಿರುದ್ಧ ಹೋರಾಡಿ ಸಿಂಹಾಸನನ ಪಡ್‌ಕಣಿಕೆ ಗ್ಯಾನ ಮಾಡ್‌ತಿದ್ದೊ. ಆದರೆ ಕೊಡ್‌ಗ್‌ನ ಕೆಲವು ಮುಖಂಡರ್‌ಗ ಬ್ರಿಟಿಷರ ಪರವಾಗಿದ್ದೊ. ಹಂಗಾಗಿ ಇವು ಕೊಡ್‌ಗ್‌ನ ಬುಟ್ಟು ದಕ್ಷಿಣ ಕನ್ನಡನ ತಮ್ಮ ಕಾರ್ಯಸ್ಥಾನ ಮಾಡಿಕಂಡೊ. ಇದ್‌ರ ಬಗ್ಗೆ ಸುಳಿವು ಸಿಕ್ಕಿದಂಗೆ ಬ್ರಿಟಿಷರ್ ಅಪರಂಪಾರ ಮತ್ತೆ ಕಲ್ಯಾಣಸ್ವಾಮಿ ಇವರ್‌ನ 1837ರ್‌ಲಿ ಸೆರೆಹಿಡ್‌ದೊ. ಇದಾದ ಮೇಲೆ ಅಪ್ಪಯ್ಯಗೌಡ, ರಾಮೇಗೌಡ, ನಂಜಯ್ಯನವು ಈ ಹೋರಾಟದ ಹೊಣೆ ಹೊತ್ತ್‌ಕೊಂಡೊ.

ಜನಕೆ ಕಲ್ಯಾಣಸ್ವಾಮಿನ ಮೇಲೆ ಭಾರೀ ಭಕ್ತಿ ಮತ್ತೆ ನಂಬಿಕೆ ಇತ್ತ್. ಅಂವ ಹೇಳ್ದಂಗೆ ಕೇಳಿಕೆ ಎಲ್ಲವೂ ತಯಾರಿದ್ದೊ. ಹಂಗಾಗಿ ಜನ ಹೊಸಬರ್‌ನ ಒಮ್ಮೆಲೇ ಒಪ್ಪಿಕಿಲೇತ ಗ್ಯಾನ ಮಾಡಿ ಅಪ್ಪಯ್ಯಗೌಡ ಮತ್ತೆ ಜೊತೆಗಾರಂಗ ಒಂದ್ ಉಪಾಯ ಮಾಡ್‌ದೊ. ಕಲ್ಯಾಣಸ್ವಾಮಿನಂಗೇ ಕಾಂಬತಿದ್ದ ಶನಿವಾರಸಂತೆ ಹಕ್ಕಲೆ ಇದ್ದ ಹೆಮ್ಮನಿಗ್ರಾಮದ ರೈತ ಪುಟ್ಟಬಸಪ್ಪನ ಕಲ್ಯಾಣಸ್ವಾಮಿನಂಗೆ ನಟಿಸಿಕೆ ಕೇಳಿಕೊಂಡೊ. ಅಂವ ಇದ್‌ಕೆ ಒಪ್ಪಿಕಂಡ್ ಹೋರಾಟನ ಮುಂದುವರ್‌ಸಿಕಾಗಿ ಜನ್‌ರ್‌ನ ಸೇರ್‌ಸಿದೆ. ಇವನ ನಂಬಿ ಸಾಕಷ್ಟ್ ರೈತಂಗ ಮತ್ತೆ ಸರಕಾರಿ ಚಾಕರಿಲಿದ್ದವು ಎಲ್ಲವೂ ಸನ ಒಗ್ಗಟ್ಟಾಗಿ ಹೋರಾಡಿಕೆ ಒಪ್ಪಿಕೊಂಡೊ.

ನೆಲಜಿಯ ಮಂಡೀರ ಉತ್ತಯ್ಯ, ಶಾಂತಳ್ಳಿಯ ಮಲ್ಲಯ್ಯ, ಕುಕ್ಕುನೂರು

ಚೆನ್ನಯ್ಯನಂತ ಮಹಾ ಸೂರರ್‌ನೆಲ್ಲಾ ಈ ಹೋರಾಟಕೆ ಸೇರ್‌ಸಿಕೊಂಡೊ. ಚಿಕ್ಕವೀರ ರಾಜನ ಸೆರೆಹಿಡ್‌ದಾದ ಮೇಲೆ ಅವಂಗೆ ತುಂಬಾ ಬೇಕಾಗಿದ್ದ ಚೆಟ್ಟಿ ಕುಡಿಯ ಮತ್ತೆ ಕುರ್ತ ಕುಡಿಯತೇಳ್ವ ಅಣ್ಣ ತಮ್ಮಂದ್‌ರ್ ಕಾಡ್‌ಲೇ ಅಡ್‌ಗಿದ್ದೊ. ಅವರ್‌ನ ಸನ ಹುಡ್‌ಕಿ ಕರ್‌ಕಂಡ್ ಬಂದೊ. 05–03–1837ರ ಶಿವರಾತ್ರಿಯಂದ್ ಬ್ರಿಟಿಷರ ವಿರುದ್ಧ ದಂಗೆ ಏಳಿಕೆ ನಿಶ್ಚಯಿಸಿದೊ. ಇದ್‌ನ ತಿಳ್‌ಕಂಡ ಸುಳ್ಯದ ಅಟ್ಲೂರು ರಾಮಪ್ಪಯ್ಯ ಮಡಿಕೇರಿಲಿದ್ದ ಅಣ್ಣ ನಾರಾಯಣಂಗೆ ಹೇಳಿ ಬ್ರಿಟಿಷ್‌ನವ್‌ಕೆ ಇದ್ ಗೊತ್ತಾಗುವಂಗೆ ಮಾಡಿಬುಟ್ಟತ್. ಈ ಸುದ್ದಿ ಹೋರಾಟಗಾರರ ಕೆಮಿಗೆ ಬಿತ್ತ್. ಒಡನೆ ಅವು ಗ್ಯಾನ ಮಾಡಿಕಂಡಿದ್ದ ದಿನಕ್ಕೆ ಮುಂದೆನೇ ದಂಗೆ ಏಳಿಕೆ ನಿರ್ಧರಿಸಿದೊ.

ಇದ್‌ಕಾಗಿ ಸುಮಾರು ಹನ್ನೆರಡ್ ಸಾವಿರಕೂ ಹೆಚ್ಚ್‌ನ ಕ್ರಾಂತಿವೀರಂಗ ಅಪ್ಪಯ್ಯಗೌಡ್ರ ಮುಂದಾಳತ್ವಲಿ ದಕ್ಷಿಣದ ಕಡೆಗೆ ದಂಡೆತ್ತಿ ಹೋದೊ. ಸುರೂಲಿ ಪಿತೂರಿಕಾರ ಅಟ್ಲೂರು ರಾಮಪ್ಪಯ್ಯನ ಮಟ್ಟಹಾಕಿ ಬೆಳ್ಳಾರೆ ಕೋಟೆನ ವಸ ಪಡ್‌ಸಿಕಂಡೊ. ಮಂಗಳೂರ್‌ನ ಸನ ಹೋರಾಡಿ ಗೆದ್ದೊ. ಕಡೇಲಿ ಕೊಡ್‌ಗ್‌ಗೆ ಮುತ್ತಿಗೆ ಹಾಕಿಕೆ ನಿಶ್ಚಯಿಸಿದೊ. ಈ ಸೇನೆಗೆ ಅಪ್ಪಯ್ಯಗೌಡರೇ ಮಹಾದಂಡನಾಯಕರಾಗಿದ್ದೊ. ಚೆಟ್ಟಕುಡಿಯ, ಕುರ್ತಕುಡಿಯ, ಮಂಡೀರ ಉತ್ತಯ್ಯ, ಕೂಜುಗೋಡು ಮಲ್ಲೇಗೌಡ ಪ್ರಮುಖ ಸೇನಾನಿಗ ಆಗಿದ್ದೊ.

ಬಾರೀ ಎಚ್ಚರಿಕೆಲಿ ಸೇನೆ ಹೊರ್‌ಟತ್, ಅಪ್ಪಯ್ಯಗೌಡ್ರು ಮುಂದಾಲೋಚನೆಂದ ಸೇನೆನ 2 ಭಾಗ ಮಾಡ್‌ದೊ. ಒಂದ್ ಭಾಗನ ಸಂಪಾಜೆ ದಾರಿಲಿ ಕಳ್‌ಸಿದೊ. ಇನ್ನೊಂದ್ ತುಕಡಿನ ಕರ್‌ಕಂಡ್ ಹಾಸನದ ಬಿಸಿಲೇಘಾಟ್ ದಾಟಿ ಕೊಡ್‌ಗ್‌ಗೆ ಬಂದೊ. ಈ ಸುದ್ದಿ ತಿಳ್‌ದಂಗೆ ಬ್ರಿಟಿಷ್ ಅಧಿಕಾರಿ ಲಿಹಾರ್ಡಿತ ಹೇಳ್‌ವವು ತನ್ನ ಕಡೆಯವರ್‌ನ ಕರ್‌ಸಿಕಂಡೊ.

ಬಿಸಿಲೆಘಾಟ್‌ನತ್ರ ಅಪ್ಪಯ್ಯಗೌಡ್ರು ಮತ್ತೆ ಜೊತೆಲಿದ್ದ ಕ್ರಾಂತಿ ವೀರಂಗ ಗಡಿ ದಾಟಿ ಬಂದೊ. ಆ ದಂಗೆಲಿ ಉತ್ತರ ಕೊಡ್‌ಗ್‌ನ ಜನನೂ ಸಾಕಷ್ಟ್ ಸೇರಿಕಂಡೊ. ಅಷ್ಟರ್‌ಲಿ ಬಂದೆತ್ತಿದ ಬ್ರಿಟಿಷ್ ಸೇನೆಲಿ ಎಲ್ಲರತ್ರನೂ ಆಧುನಿಕ ಆಯುಧಗ, ಶಸ್ತ್ರಾಸ್ತ್ರಗ ಇದ್ದೊ. ಹಳೆ ಕತ್ತಿ, ಕೋವಿ, ದೊಣ್ಣೆಗಳ್‌ನ ಮಾತ್ರ ಹಿಡ್‌ಕಂಡ್ ಹೋರಾಟಕೆ ಬಂದಿದ್ದ ರೈತಂಗ ಹೆದ್‌ರಿ ಅಲ್ಲಿಂದ ಕಾಲುಕಿತ್ತೊ. ಆದರೆ ಕ್ರಾಂತಿವೀರಂಗ ಮಾತ್ರ ಇಟ್ಟ ಹೆಜ್ಜೆನ ಹಿಂದಕೆ ತೆಗ್‌ಯದೆ ಸೂರರಂಗೆ ನಿತ್ತೊ.

ಎಷ್ಟೇ ಎದೆಕೊಟ್ಟ್ ಹೋರಾಡ್‌ರೂ ಸನ ಬ್ರಿಟಿಷನವ್‌ರ ದೊಡ್ಡ ಸೇನೆನ ಎದ್‌ರ್ ಇವರ ಆಟ ನಡ್‌ತ್‌ಲೆ. ಎಷ್ಟ್ ನೆತ್ತ್ ಹರ್‌ಸಿರೂ, ಜೀವದ ಹಂಗ್ ತೊರ್‌ದು ಹೋರಾಡ್‌ರೂ ಅವರ್‌ನ ಸೋಲ್‌ಸಿಕೆ ಆತೇಲೆ. ಕ್ರಾಂತಿವೀರಂಗ ಎಲ್ಲಾ ಬ್ರಿಟಿಷರ ಸೆರೆಯಾಳಾದೊ. ಕ್ಯಾಪ್ಟನ್ ಎವರೆಸ್ಟ್ ಮತ್ತೆ ಗ್ರೀನ್ ನಾಯಕತ್ವಲಿ

ಬ್ರಿಟಿಷ್ ಸೇನೆ ಮಂಗಳೂರ್‌ನ ಸನ ತನ್ನ ವಶ ಮಾಡಿಕಣ್‌ತ್. ಅದೇ ಸೇನೆ ಕೊಡ್‌ಗಿಗೂ ಕಾಲಿಟ್ಟ್ ಕೆದಂಬಾಡಿ ರಾಮೇಗೌಡ್ರ ಸೇನೆನೂ ಸೋಲ್‌ಸಿತ್. ಅಪ್ಪಯ್ಯಗೌಡ್ರು ಅವರ ಕೈಗೆ ಸಿಕ್ಕದೆ ಪಾರಾದೊ.

ಅಪ್ಪಯ್ಯಗೌಡ್ರ್‌ನ ಸೆರೆ ಹಿಡ್‌ದ್ ಕೊಟ್ಟವ್‌ಕೆ ಹತ್ತ್‌ಸಾವಿರದ ಇನಾಂ ಕೊಟ್ಟವೇತ ಕ್ಯಾಪ್ಟನ್ ಲಿಹಾರ್ಡಿ ಡಂಗುರ ಸಾರ್‌ದೊ. ದೇಸದ್ರೋಹಿಗಳ ಚಾಡಿ ಮತ್ತೆ ಕುತಂತ್ರಂದಾಗಿ ಅಪ್ಪಯ್ಯಗೌಡ್ರ್ ಸೇರ್‌ದಂಗೆ ಹಲವು ಮುಖಂಡರ್‌ನ ಸೆರೆಹಿಡ್‌ದೊ. ಸೂರರಾದ ಕುಡಿಯ ಸಹೋದರರ್‌ಗೆ ಜೀವಾವಧಿ ಶಿಕ್ಷೆನ ಕೊಟ್ಟ್ ಸಿಂಗಾಪುರಕ್ಕೆ ಗಡಿಪಾರ್ ಮಾಡ್‌ದೊ. ಮಂಡೀರ ಉತ್ತಯ್ಯ, ಶಾಂತಳ್ಳಿ ಮಲ್ಲಯ್ಯ, ಪಾರುಪತ್ತೆದಾರ ಕೃಷ್ಣಯ್ಯನವ್‌ಕೆ ಹದ್‌ನಾಕ್ ವರ್ಸ ಸೆರೆವಾಸ ವಿಧಿಸಿದೊ. ಸುಳ್ಯದ ಕೆದಂಬಾಡಿ ರಾಮೇಗೌಡ, ಕೃತಕ ಕಲ್ಯಾಣ ಸ್ವಾಮಿ, ಪುಟ್ಟ ಬಸಪ್ಪನ ಮಂಗಳೂರ್‌ನ ಬಿಕ್ರಣಕಟ್ಟೆ ಹಕ್ಕಲೆ ನೇಣಿಗೇರ್‌ಸಿದೊ.

ಅಪ್ಪಯ್ಯಗೌಡ್ರ್‌ನ ಸಾರ್ವಜನಿಕರ ಎದುರ್‌ಲೇ ಕರ್‌ಕಂಡ್ ಬಂದ್ ಗಲ್ಲಿಗೇರ್‌ಸೊಕೂತ ಬ್ರಿಟಿಷರ ನ್ಯಾಯಾಲಯಲಿ ತೀರ್ಪು ಕೊಟ್ಟವೆ. 1837 ನೇ ಇಸ್‌ವಿ ಅಕ್ಟೋಬರ್ 31 ಕ್ಕೆ ಇವರ್‌ನ ನೇಣಿಗೆ ಹಾಕಿಕೆ ನಿರ್ಧರ್‌ಸುವೆ. ಬ್ರಿಟಿಷ್‌ನವು ಎಷ್ಟ್ ಕ್ರೂರಿಗ ಆಗಿದ್ದೋತೇಳ್ರೆ ಈ ಸಮಯಲಿ ಅಪ್ಪಯ್ಯಗೌಡ್ರ ಹೆಣ್ಣ್ ಮದುವಣಗಿತ್ತಿನಂಗೆ ಬಂದಿರೊಕೂತ ಕ್ಯಾಪ್ಟನ್ ಲಿಹಾರ್ಡಿ ಅಪ್ಪಣೆ ಕೊಟ್ಟದೆ. ಕೊಡ್‌ಗ್‌ನ ಎಲ್ಲಾ ಜನ, ರೈತಂಗ, ಊರ್ ಪಟೇಲಂಗ, ಚಾಕರಿಲಿ ಇದ್ದವ್ ಒಟ್ಟಾರೆ ಎಲ್ಲವೂ ಬಂದ್ ಸ್ವಾತಂತ್ರ್ಯ ಹೋರಾಟಗಾರಂಗೆ ಎಂತ ಗತಿ ಬಾತೂತ ನೋಡೊಕೂತ ಆಜ್ಞೆ ಹೊರ್‌ಡ್‌ಸುವೆ. ಮುಂದೆ ಯಾರೂ ಸ್ವಾತಂತ್ರ್ಯಕಾಗಿ ಹೋರಾಡಿಕಾಗದೂತ ಹೇಳ್ವ ಉದ್ದೇಸ ಇವರ್‌ದ್ದ್. ಯಾರೂ ಸನ ಯಾವ್‌ದೇ ಆಯುಧಗಳ್‌ನ ಕೈಲಿ ಹಿಡ್‌ಕಂಡಿರಿಕೆ ಬೊತ್ತು, ಎಲ್ಲನ ತನ್ನ ಕಾಲ್ ಹಕ್ಕಲೆ ತಂದಿಡೊಕೂತ ಲೀಹಾರ್ಡಿ ಹೇಳ್‌ದೆ.

1937ರ ಅಕ್ಟೋಬರ್ 31 ರಂದು ಹೊತಾರೆ ಸೂರ್ಯ ಹುಟ್ಟಿಕೆ ಮುಂದೆನೇ ಭಾರತಾಂಬೆನ ಸೂರ ಮಂಜ ಅಪ್ಪಯ್ಯಗೌಡ್ರು ಎದ್ದ್ ಮೀದು ಕುಲದೇವರ್‌ನ ನೆನ್‌ಸಿಕಂಡ್ ಪೂಜೆ ಮಾಡ್‌ವೆ. ಹೆತ್ತವ್‌ರ ಗ್ಯಾನಲಿ ಕೈ ಮುಗ್‌ದವೆ. ಒಂದ್ ಸಾಸಿವೆ ಕಾಳ್‌ನಷ್ಟ್ ಹೆದ್‌ರಿಕೆ ಸನ ಅವರ ಮೊಕಲಿ ಕಾಂಬತಿತ್‌ಲೆ. ಬ್ರಿಟಿಷ್ ಸೈನಿಕಂಗ ಬಂದ್ ಅವರ ಕೈಕಾಲ್‌ಗಳ್‌ಗೆ, ಶರ್‌ರಕೆ ಸಂಕೋಲೆಗಳ್‌ನ ಹಾಕಿ ಬಂಧಿಸುವೆ. ಬಂದ ಸಾರ್ವಜನಿಕಂಗೆಲ್ಲಾ ನೋಡುವಂಗೆ ಗಲ್ಲುಕಂಬದ ದಾರಿಯ ಎರ್‌ಡೂ ಬದಿಗಳ್‌ಲಿ ಸಾಲಾಗಿ ಅವರ್‌ನ ನಿಲ್ಸುವೆ. ಬಲ್‌ದ ಬಾಗಲಿ ಸಂಕೋಲೆಗ ಇದ್ದರೂ ಸನ ಸಿಂಹದ ನಡಿಗೆಲಿ ಗೌಡ್ರು ಗಲ್ಲುಕಂಬದತ್ರ ಬಂದವೆ. ನೇಣು ಕಂಬದತ್ರ ಗೌಡ್ರ ಎರ್‌ಡೂ ಕೈಗಳ್‌ನ ಹಿಂದಕೆ ಮಡ್‌ಗಿ ಕಟ್ಟಿ ಅವರ್‌ನ ಯಾವ ಕಾರಣಕಾಗಿ ನೇಣಿಗೇರ್‌ಸ್‌ತಾ ಒಳೋತೇಳ್‌ದನ ಎಲ್ಲವ್‌ಕೆ ಕೇಳ್‌ವಂಗೆ

ಜೋರ್‌ಲಿ ಓದಿ ಹೇಳುವೆ. ಹಂಗೆನೇ ಗೌಡ್ರ ಕೊನೆ ಆಸೇನಾದ್ರೂ ಉಟ್ಟಾತ ಕೇಳ್‌ವೆ. ಅಪ್ಪಯ್ಯಗೌಡ್ರಿಗೆ ನಗೆ ತಡಿಯಕಾಲೆ. ಗಹಗಹಿಸಿ ನಗಾಡ್‌ರೂ ಸನ ಆ ವೀರನ ಕಣ್ಣ್‌ಗಳ್‌ಲಿ ಕಿಚ್ಚ್‌ನ ಕಿಡಿ ರಟ್ಟಿದೆ. "ಒಂದ್ ಸಿಂಹನ ಬೋನುಲಿಟ್ಟರೂ ಸನ ಅದ್ ತನ್‌ಗೆ ಬೇಕಾದ ನೆತ್ತ್ ಮಾಸನ ಬುಟ್ಟು ಬೇರೆಂತದೂ ಕೇಳ್‌ದೇಲೆ. ನನ್ನ ಶರ್‌ರ ಸಂಕೋಲೆಗಳ್‌ಂದ ಬಂಧಿಯಾಗಿದ್ದರೂ ಸನ ನಿಮ್ಮ ಬಿಸಿನೆತ್ತ್‌ನ ಹೀರೊಕೂತನೇ ನನ್ನ ಆಸೆ. ರಣಹೇಡಿಗಳೇ, ತಾಕತ್ತಿದ್ದರೆ ನನ್ನ ಸಂಕೋಲೆಗಳ್‌ನ ಬಿಚ್ಚಿ ನನ್ನ ಮುಂದೆ ನಿಲ್ಲಿ. ನಿಮ್ಮ ತಲೆಗಳ್‌ನ ಹೆಂಗೆ ಕಡ್‌ದ್ ಬಿಸಾಕಿನೇತ ನೋಡಿ. ಭಾರತ ಮಾತೆ ಬಂಜೇತ ಗ್ಯಾನ ಮಾಡ್ಬೇಡಿ. ನಾನ್ ಸತ್ತರೂ ಸನ ನಿಮ್ಮನ ಮಟ್ಟಮಾಡುವಂತ ಸಾವಿರಾರ್ ಸೂರಂಗ ಅವಳ ಹೊಟ್ಟೆಲಿ ಹುಟ್ಟಿ ಬಂದವೆ. ಭಾರತಮಾತೆಗೆ ಸ್ವಾತಂತ್ರ್ಯ ಸಿಕ್ಕೊಕು, ನೀವೆಲ್ಲಾ ಸಂಪೂರ್ಣ ನಾಸ ಆಕೂತೇಳ್‌ದೆ ನನ್ನ ಕೊನೆಯ ಆಸೆ" ತ ಅಪ್ಪಯ್ಯಗೌಡ್ರು ಆಕಾಸಕೆ ಕೇಳ್‌ವಂಗೆ ಘರ್ಜಿಸುವೆ.

ಸಾವ್‌ನ ಬಾಗ್ಲ್‌ಲಿ ನಿತ್ತಿದ್ದರೂ ಸನ ಬ್ರಿಟಿಷ್‌ನವ್‌ಕೆ ತಲೆಬಾಗ್‌ಸದೆ ಎದೆಯುಬ್ಬಿಸಿ ನಿತ್ತಿದ್ದ ವೀರಾಗ್ರಣಿ ಅಪ್ಪಯ್ಯಗೌಡ್ರ ದೇಸಪ್ರೇಮಕೆ ಬ್ರಿಟಿಷ್‌ನವೂ ತಲೆದೂಗಿದೊ. ನೆರ್‌ದ ಜನಗ "ಉಘೇ ಉಘೇ" ತ ಕೂಗಿದೊ. ಹಿಂಗೆ ಮಡಿಕೇರಿ ಕೋಟೆ ಆವರಣಲಿ ಭಾರತಾಂಬೆನ ವೀರ ಮಂಜ ಅಪ್ಪಯ್ಯಗೌಡನ ನೇಣಿಗೇರ್‌ಸಿದೊ.

ಬ್ರಿಟಿಷ್‌ನವು ದಾಖಲ್‌ಸಿಟ್ಟ ಪ್ರಕಾರ 1857 ರ್‌ಲಿ ನಡ್‌ದ ಸಿಪಾಯಿ ದಂಗೆನೇ ಭಾರತದ ಸುರೂನ ಸ್ವಾತಂತ್ರ್ಯ ಸಂಗ್ರಾಮ. ಆದರೆ ಅದ್‌ಕೂ 25 ವರ್ಸಗಳ್‌ಗೆ ಮುಂದೆನೇ ಕೊಡ್‌ಗ್‌ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕಾಗಿ ದಂಗೆ ಎದ್ದಿದ್ದೊ. ಸುಳ್ಯಲಿ ನಡ್‌ದ 'ಅಮರ ಸುಳ್ಯ ಕಾಟಕಾಯಿ' ತೇಳ್ವ ಹೋರಾಟನೇ ಭಾರತದ ಸುರೂನ ಸ್ವಾತಂತ್ರ್ಯ ಸಂಗ್ರಾಮ ಆಗಿದ್ದರೂ ಸನ ಜಾತಿಮತ್ಸರ ಮತ್ತೆ ದೇಸದ್ರೋಹಿಗಳಿಂದಾಗಿ ಇದ್‌ಕೆ ಸರಿಯಾದ ಪ್ರಚಾರನೂ ಸಿಕ್ಕಿತ್‌ಲೆ ಮತ್ತೆ ಇತಿಹಾಸಲಿ ಬರಹದ ರೂಪಲಿ ಇದ್ ದಾಖಲೆನೂ ಆತ್ಲೇತ ಕಂಡದೆ. ಹಂಗಾಗಿ ಈ ಹೋರಾಟನೂ ಅದ್‌ರ ಹಿಂದಿದ್ದ ಗೌಡ ಜನಾಂಗದ ಸೂರರ ಹೆಸರ್‌ಗೆಲ್ಲಾ ತೆರೆಮರೆಲೇ ಉಳ್ದ್ ಹೋವ್‌ಟು.

ಈಗಾಗಿ ವೀರಯೋಧ ಅಪ್ಪಯ್ಯಗೌಡರ ನೆಂಪುಲಿ ಮಡಿಕೇರಿನ ಗೌಡಸಮಾಜ ರಸ್ತೆಗೆ ಅವ್‌ರ ಹೆಸರ್‌ನ ಇಸಿಯೊಳೊ. ಹುತಾತ್ಮ ಅಪ್ಪಯ್ಯಗೌಡ್ರ ವೀರಗಾಥೆನ ನಾವ್‌ಗೆಲ್ಲಾ ಗ್ಯಾನ ಬರ್‌ಸುವಂಗೆ ಅವ್ ಕುದುರೆನ ಮೇಲೆ ಕುದ್ದ್‌ಕಂಡ ಕಂಚಿನ ಪುತ್ಥಳಿನ ಮಡಿಕೇರಿನ ಪ್ರವೇಸ ದ್ವಾರಲಿ ಸುದರ್ಶನ ವೃತ್ತಲಿ ನಾವ್ ನೋಡಕ್.

02–01–2012ರ್‌ಂದ್ ನಿಲ್‌ಸಿದ ಅಪ್ಪಯ್ಯಗೌಡರ ಕಂಚಿನ ಮೂರ್ತಿಯ ಕಲ್ಲ್‌ಲಿ ಗೌಡರ ಹೋರಾಟದ ಕುರ್ತ್ 'ಭಾಷ್ಪಾಂಜಲಿ' ತೇಳಿ ಅರೆಬಾಸೆನ

ಹೆಸರ್‌ವಾಸಿ ಸಾಹಿತಿ ಶ್ರೀ ಬಾರಿಯಂಡ ಜೋಯಪ್ಪನವು ಬರ್ದ ಪದ್ಯ ಹಿಂಗುಟ್ಟು.

" ನಮ್ಮದೀ ಮನೆ, ನೆಮ್ಮದಿಯ ತವರ್ಮನೆ
ಫರಂಗಿಗಳಿಗಿಲ್ಲೇನು ಕೆಲಸ ?
ಪ್ರಭುಗಳ ಕಾಲ ಬಳಿಯೇ ಕುಸಿತ! ಗಡಿಪಾರಿನಾದೇಶ!!
ಬಡಿದೆದ್ದಿತು, ಮೈ ಕೊಡವಿತು ಕೊಡಗಿನ ವೀರಜನ
ಕ್ರಾಂತಿಯ ಸೆಲೆಯೊಡೆಯಿತು, ಬೋರ್ಗರೆಯಿತು ಧುಮುಕಿ
ಗಿರಿಗಿರಿಯಲೂ ಮಾರ್ಮೊಳಗಿತು ರಣ ಕಹಳೆಯ ಮೊರೆತ
ದುರುಗುಟ್ಟಿತು, ಥರಗುಟ್ಟಿತು, ಮಡುಗಟ್ಟಿತು ಭೀತಿ
ಜನ ಮನದಲಿ ನೆಲೆ ನಿಂತಿತು ಅಮರ ಸುಳ್ಯದ ಕ್ರಾಂತಿ
ಸೆಳೆ ಮಿಂಚಿಗೆ ಎದೆ ಸೀಳುತ ಮುನ್ನುಗ್ಗಿತು ಸೇನೆ
ಒಳ ಸಂಚಿನ ಅರಿವಿಲ್ಲದೆ ಸೆರೆಯಾಯಿತು 'ಸಿಂಹ'
ಶರಣಾಗದೆ ನೇಣಾಯಿತು ಅಪ್ಪಯ್ಯಗೆ ಅಂದು
ಸ್ವಾತಂತ್ರ್ಯದ ನೆರಳಾಯಿತು ಕೊಡಗಿಗೆ ಇಂದು
ಕರ ಮುಗಿಯುತ ಶಿರಬಾಗುವ ಅಪ್ಪಯ್ಯಗೆ ಎಂದೂ".







# ಗೌಡ ಜನಾಂಗದ ಹೆಮ್ಮೆ ಕುರುಂಜಿ ಶ್ರೀ ವೆಂಕಟರಮಣ ಗೌಡ

ಒಬ್ಬ ಸಾಮಾನ್ಯ ಮನ್‌ಸ ಒಳ್ಳೆ ಮನ್‌ಸ್ ಮಾಡ್ರೆ ಏನೆಲ್ಲಾ ಸಾಧಿಸಕೂತ ಹೇಳ್‌ದಕೆ ಒಂದು ಅಪ್ಪಟ ಉದಾರಣೆ ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಗೌಡ ಜನಾಂಗದ ಹೆಮ್ಮೆಯ ಮಂಜ ಕುರುಂಜಿ ಶ್ರೀ ವೆಂಕಟ್ರಮಣ ಗೌಡ. ಅವು ಆಧುನಿಕ ಸುಳ್ಯದ 'ಅಮರ ಶಿಲ್ಪಿ'. ಈ ಗೌಡ್ರು 1928 ನೇ ಇಸ್‌ವಿ ಡಿಸೆಂಬರ್ ತಿಂಗಳ್‌ಲಿ ಅಪ್ಪ ಕುರುಂಜಿ ಮಹಾಲಿಂಗ ಮಾಸ್ತರ್ ಮತ್ತೆ ಅವ್ವ ಲಕ್ಷ್ಮಿಗೆ ಆರ್ ಜನ ಗಂಡ್ ಮಕ್ಕಳ್‌ಲಿ ಎರ್‌ಡನೇ ಮಂಜನಾಗಿ ಹುಟ್ಟಿದೊ. ಸಣ್ಣದಿರ್‌ಕನೇ ಬಾರೀ ಚುರ್‌ಕಾಗಿದ್ದ ಇವ್ ಆಟ, ಪಾಠ, ಈಜು ಎಲ್ಲದ್‌ರ್‌ಲೂ ಮುಂದೆ ಇದ್ದೊಗಡ. ನೀರ್‌ಲಿ ಮುಳ್‌ಗ್‌ತಿದ್ದ ಒಬ್ಬ ವೈದ್ಯನ ಈಜಿ ದಡ ಸೇರ್‌ಸಿ ಜೀವ ಉಳ್‌ಸುವ ಸೂರತನನೂ ಆಗಲೇ ತೋರ್‌ಸಿದ್ದೊ. ಮಾಸ್ತರಿಕೆನೊಟ್ಟಿಗೆ ಕೃಷಿಕನೂ ಆಗಿದ್ದ ಶ್ರಮಜೀವಿ ಅಪ್ಪನ ನೋಡಿ ಮನ್‌ಸಿಟ್ಟ್ ದುಡ್‌ದರೆ ಯಾವನೂ ಮೇಲೆ ಬರಕ್‌ತ ಆಗಲೇ ತಿಳ್‌ಕಂಡಿದ್ದೊ.

ಸುಮಾರು ಹದ್‌ನಾಕನೇ ವಯಸ್‌ಲೇ ಅವರ ಜಾಗೆನ ಹಕ್ಕಲೆ ಇದ್ದ ಭೂಮಿನ ತಕಂಬಷ್ಟ್ ವ್ಯೆವಾಟು ಜ್ಞಾನ ಅವ್‌ಕಿತ್ತ್. ಅದ್‌ಕೆ ತಾನೇ ಹೇಳ್‌ದು, "ಬೆಳೆವ ಸಿರಿ ಮೊಳಕೆಲಿ" ತ? ಎಲ್ಲವೂ ಕೂಡಾಡಿಕಂಡ್ ಕೆಲ್‌ಸ ಮಾಡ್‌ತಿದ್ದ ಕಾಲ ಅದ್. ಆಗಲೇ ಭೂಮಿ ತಕಂಡ್ ಬೇಸಾಯ ಮಾಡಿಕಂಡ್ " ಕೈ ಕೆಸರಾದರೆ ಬಾಯಿ ಮೊಸರೂ" ತ ಗೊತ್ತ್ ಮಾಡಿಕಂಡಿದ್ದೊ. ಗೌಡ್ರ ಅಪ್ಪ ಸಣ್ಣ ವಯ್‌ಸ್‌ಲೇ ತೀರಿಕಂಡೊ. ಹಂಗಾಗಿ ಇವ್‌ಕೆ ತುಂಬಾ ಕಲಿಯಕೆ ಅವಕಾಸ ಸಿಕ್ಕದಾತ್. ಮನೆ ಜವಾಬ್ದಾರಿ ಇವರ ಹೆಗಲೇರ್‌ತ್. ತಮ್ಮಂದ್‌ರ್‌ಗೆ ಲಾಯ್ಕಲಿ ವಿದ್ಯಾಭ್ಯಾಸ ಕೊಡ್‌ಸಿ, ಇದ್ದ ಒಬ್ಬಳೇ ತಂಗೆನ ಬಾರೀ ಗೌಜಿಲಿ ಮೊದುವೆ ಮಾಡ್‌ದೊ. ಪಂಡ್‌ಕಾಲಲೇ

ಇವ್ ಒಂದೇ ಸತಿ 800 ಗಿಡಗಳ ತೆಂಗ್‌ನ ತೋಟನ ಮಾಡ್‌ಸಿ ಎಲ್ಲವ್‌ಕೂ ಮಾದರಿಯಾದೊ. ಕಾಂತಮಂಗಲ ತೋಟಲೂ ಇವ್ ಒಂದೇ ವರ್ಸಲಿ ಹತ್ತ್-ಹದಿನೆಂಟ್ ಸಾವಿರಕೂ ಹೆಚ್ಚಾಗಿ ಅಡಿಕೆ ಗಿಡಗಳ್‌ನ ನೆಡ್‌ಸಿದ್ದೊಗಡ. ಎಂತದೇ ಮಾಡ್ರೂ ದೊಡ್ಡ ಪ್ರಮಾಣಲಿ ಮಾಡಿ ಲಾಭ ಗಳ್‌ಸುವ ಮುಂದಾಲೋಚನೆ ಅವ್‌ಕಿತ್ತ್.

ಕೃಷಿಯಷ್ಟೇ ಅಲ್ಲ, ಸುಳ್ಯಲಿ "ವೆರೈಟಿ ಸ್ಟೋರ್" ತ ಹೇಳ್‌ವ ಅಂಗಡಿನೂ ಸುರು ಮಾಡಿ ಹೆಸ್‌ರೂ, ಕಾಸೂ ಎರ್‌ಡನೂ ಗಳ್‌ಸಿದೊ. ಮತ್ತೆ "ಕುರುಂಜಿ ಕಾರ್ಸ್ ಫ್ಯಾಷನ್ ಹೌಸ್"ತೇಳ್ವ ಬಟ್ಟೆ ಅಂಗಡಿನೂ ತೆರ್‌ದೊ. ಇವೆಲ್ಲದ್ರೊಟ್ಟಿಗೆ ಸಮಾಜ ಸೇವೆಲೂ ತೊಡ್‌ಗಿಕಂಡ ಅವ್ "ಕುಟುಂಬ ಯೋಜನೆ'ಲಿ ಆಪರೇಷನ್ ಮಾಡ್‌ಸಿಕಂಡವ್‌ಕೆ ಸೀರೆ, ಪಂಚೆ, ಶಾಲು, ಸ್ಟೀಲ್ ತಟ್ಟೆ ಹಿಂಗೆಲ್ಲಾ ಕೊಟ್ಟ್ ಹುರ್‌ದುಂಬಿಸ್‌ತಿದ್ದೊ, ತಾವು ಕೂಡಾ "ಎರ್‌ಡ್ ಬೇಕ್ ಮೂರು ಸಾಕ್"ತ ಮಾಡಿಕಂಡ್ ಮಾದರಿಯಾಗಿದ್ದೊ. 1960ರ ಸಮಯಲಿ ಸಿಮೆಂಟ್ ಕಾಂಕ್ರೀಟ್ ಕಟ್ಟಡನ ಸುರೂಲಿ ಸುಳ್ಯಲಿ ಕಟ್ಟ್‌ಸಿ ತೋರ್‌ಸಿದವ್ ಇವೇ. ಅಲ್ಲಿ ಮುಟ್ಟ ಹಂಚ್‌ನ ಮನೆಗ ಮಾತ್ರ ಸುಳ್ಯಲಿದ್ದೊ.

1976ರ್‌ಲಿ ನೆಹರೂ ಸ್ಮಾರಕ ಮಹಾವಿದ್ಯಾಲಯದ ಸ್ಥಾಪಿಸಿದ ಇವ್ ಸುಳ್ಯ ತಾಲೂಕ್‌ನ ಜ್ಞಾನ ಭಂಡಾರ ಮಾಡ್‌ದೊ. ಎಲ್ಲಾ ತರದ ವಿದ್ಯಾಭ್ಯಾಸನೂ ಸುಳ್ಯಲೇ ಸಿಕ್ಕುವಂಗೆ ಮಾಡ್‌ದ ಮಹಾನ್ ವ್ಯಕ್ತಿ ಮತ್ತೆ ಶಕ್ತಿ ನಮ್ಮ ಗೌಡ್ರು. ಹೇಳೊಕುತಾದರೆ ಸುಳ್ಯ ಬಸ್‌ಸ್ಟಾಂಡಿಂದ ಹಿಡ್‌ದ್ ಮೆಡಿಕಲ್ ಕಾಲೇಜ್ ಮುಟ್ಟ ಇವರ್‌ದೇ ಪ್ರಯತ್ನ ಎದ್ದ್ ಕಂಡದೆ.

"ಕೆರೆಯ ನೀರನು ಕೆರೆಗೆ ಚೆಲ್ಲಿ"ತ ಜ್ಞಾನಿಗ ಹೇಳ್‌ದಂಗೆ ತನ್ನ ದುಡಿಮೆಲಿ ಒಂದ್ ಭಾಗನ ಸಮಾಜಸೇವೆಗೆ ಇವ್ ಮೀಸಲಿಟ್ಟಿದ್ದೊ. 1986ರ್‌ಲಿ ಇಂಜಿನಿಯರಿಂಗ್ ಕಾಲೇಜು ಮತ್ತೆ 2002ರ್‌ಲಿ ಸುಳ್ಯಕೆ ಬಂದ ಮೆಡಿಕಲ್ ಕಾಲೇಜು ಇವ್‌ರ ಕನ್‌ಸ್‌ನ ಕೂಸ್‌ಗ. ಇದಲ್ಲದೇ ಅವ್ ಕಟ್ಟಿ ಬೆಳ್‌ಸಿದ ವಿದ್ಯಾಸಂಸ್ಥೆಗ ಸಾಕಷ್ಟ್ ಸಂಖ್ಯೆಲಿ ಒಳೊ. ಬೇಕಷ್ಟ್ ವಿದ್ಯಾ ಸಂಸ್ಥೆಗಳ್‌ಗೆ, ಮದುವೆ ಮಂಟಪಗಳ್‌ಗೆ ಕೈನೀಂಡಿ ದಾನ ಮಾಡ್‌ದೊ. ಹಿಂಗೆ ಅವ್ ಕೊಟ್ಟದಕೆ, ಬೆಳ್‌ಸಿದಕೆ ಲೆಕ್ಕ ಸಿಕ್ಕುಲೆ.

ವಾಮನ ರೂಪಿಯಾಗಿದ್ದ ಗೌಡ್ರು ತ್ರಿವಿಕ್ರಮನಂಗೆ ತಾವ್ ಬೆಳ್‌ದದಷ್ಟೇ ಅಲ್ಲ ಎಲ್ಲರ್‌ನೂ ಬೆಳ್‌ಸಿದೊ. ಸುಳ್ಯಲಿ ಪಾಲಿಟೆಕ್ನಿಕ್ ಕಾಲೇಜ್, ಐಟಿಐ ಕಾಲೇಜ್, ಆಂಗ್ಲ ಮಾಧ್ಯಮ ಪ್ರೌಢಶಾಲೆ, ವಿದ್ಯಾರ್ಥಿ ನಿಲಯಗ, ಅಜ್ಜಾವರ, ಅರಂತೋಡು, ಗುತ್ತಿಗಾರು, ಪೆರಾಜೆ, ಕೊಲ್ಲಮೊಗ್ರು, ಸುಳ್ಯಗಳ್‌ಲಿ ಪ್ರೌಢಶಾಲೆಗಳ್‌ನ ಮತ್ತೆ ಪದವಿ ಪೂರ್ವ ಕಾಲೇಜ್‌ಗಳ್‌ನ ಸ್ಥಾಪಿಸಿದೊ. ಸುಮಾರ್ 30ಕ್ಕಿಂತ ಹೆಚ್ಚ್ ಜ್ಞಾನ ದೇಗುಲಗ, 126 ಪ್ರಾಥಮಿಕ-ಪ್ರೌಢ ಶಾಲೆಗ, ಆಂಗ್ಲ ಭಾಷಾ ಗ್ರಂಥಾಲಯಗ ಎಲ್ಲನೂ ಇವರ ಶ್ರಮದ ಫಲ. ವೈದ್ಯಕೀಯ ಕಾಲೇಜ್, ಬೆಂಗಳೂರ್‌ಲಿ ಒಕ್ಕಲಿಗರ

ಸಂಘದ ನಿರ್ದೇಶಕನಾಗಿ, ವೈದ್ಯಕೀಯ, ತಾಂತ್ರಿಕ ಹಿಂಗೆ ಸುಮಾರು 27 ಶಿಕ್ಷಣ ಸಂಸ್ಥೆಗಳ್‌ಗೆ ಮಾರ್ಗದರ್ಶಕರಾಗಿ ನಿತ್ತೊ. ಕರ್ನಾಟಕಲಿ ಸುಮಾರು 18ಕ್ಕಿಂತ ಹೆಚ್ಚ್ ಕಲ್ಯಾಣ ಮಂಟಪಗಳ್‌ನ ಕಟ್ಟ್‌ಸಿದೊ. ಸುಳ್ಯಲಿ ಪುರಭವನ ಸ್ಥಾಪನೆ ಮಾಡ್‌ಸಿದೊ. ಸುಳ್ಯ ಶ್ರೀ ಚನ್ನಕೇಶವ ದೇವಸ್ಥಾನಕೆ ಕೈತುಂಬಾ ದಾನ ಮಾಡಿ ಜೀರ್ಣೋದ್ಧಾರ ಮಾಡ್‌ಸಿ ಕೃತಾರ್ಥರಾದೊ.

ಕುರುಂಜಿ ಗೌಡ್ರು ಕೊಡ್‌ಗ್‌ನ ಅಳಿಯತೇಳ್ವ ಹೆಮ್ಮೆ ನಮ್ಮದ್. ಕೊಡ್‌ಗ್‌ನ ಪರಿಚನ ಮನೆಯ ಜಾನಕಿಯವ್ ಇವ್‌ರ ಹೆಣ್ಣ್. ಅವ್ ಕೂಡಾ ಗಂಡಂಗೆ ಬೆನ್ನೆಲುಬಾಗಿ ನಿತ್ತೊ. ಗೌಡ್ರು ಮಾಡಿಟ್ಟಂತ ದೊಡ್ಡ ದೊಡ್ಡ ತೋಟಗಳ ಸಂಪೂರ್ಣ ಜವಾಬ್ದಾರಿನ ತಾವೇ ತಕಂಡೊ. ಬುದ್ಧಿವಂತ ಮಕ್ಕಳಾದ ಡಾ. ಚಿದಾನಂದ, ಡಾ.ರೇಣುಕಾಪ್ರಸಾದ್ ಮತ್ತೆ ಮಗಳು ಗೋವರ್ಧಿನಿ ಇವರ ಪೊರ್ಲುನ ದಾಂಪತ್ಯದ ಬಳ್ಳಿಲಿ ಅರಳಿದ ಹೂಗ. ಮತ್ತೆ ಬಂದ ಅಳಿಯ ಡಾ. ಜಯಕುಮಾರ್, ಸೊಸೆಗ ಶೋಭಾ ಚಿದಾನಂದ, ಡಾ. ಜ್ಯೋತಿ ರೇಣುಕಾಪ್ರಸಾದ್, ಪಿಳ್ಳಿಕ ಐಶ್ವರ್ಯ, ಅಕ್ಷಯ, ಅಭಿಜ್ಞ, ಮೌರ್ಯಪ್ರಸಾದ್, ಅಶುಮಂತ್, ನಿಯೋಚೈತ್ರನವು ಗೌಡ್ರ ಕುಟುಂಬನ ಕುಸೀಲಿ ತೇಲ್‌ಸಿದೊ. ಇವೆಲ್ಲಾ ಎಷ್ಟೇ ಸ್ಥಿತಿವಂತರಾಗಿದ್ದರೂ, ವಿದ್ಯಾವಂತರಾಗಿದ್ದರೂ ಸನ ಮಾನವೀಯ ಮೌಲ್ಯಗಳ್‌ಗೆ ಬೆಲೆ ಕೊಟ್ಟ್‌ಕಂಡ್ ಬೊದ್ಕುವ ರೀತಿನ, ನೀತಿನ ತಮ್ಮ ಹೆತ್ತವರ್‌ನ ನೋಡಿ ಕಲ್ತ್‌ಕಂಡೊ.

ಸಂಪೂರ್ಣಾಗಿ ಸಾಮಾಜಿಕ ಕಳಕಳಿ ಹೊಂದಿದ್ದ ಗೌಡ್ರು ಸಮಾಜಲಿ ಯಾವ್‌ದೇ ಅಭಿವೃದ್ಧಿ ಕೆಲ್‌ಸ ಇದ್ದರೂ ಸನ ಪ್ರೋತ್ಸಾಹ ಕೊಡ್‌ತಿದ್ದೊ. ನೂರಾರ್ ವಿದ್ಯಾಸಂಸ್ಥೆಗ, ದೇವಸ್ಥಾನಗ, ಇವ್‌ರ ಸಾಯಲಿ ವೃದ್ಧಿ ಕಂಡೊ. ಸುಳ್ಯ ತಾಲೂಕು ರಚನೆ, ಸುಳ್ಯ ಕೋರ್ಟ್ ಸ್ಥಾಪನೆ, ಕಾಂತಮಂಗಲ ಆಲೆಟ್ಟಿ ತೋಡಿಕಾನ ಸೇತುವೆಗಳ ನಿರ್ಮಾಣ, ಸುಳ್ಯ ಅರಂತೋಡು ಸರ್ಕಾರಿ ಆಸ್ಪತ್ರೆ, ಸುಳ್ಯದ ಒಳಚರಂಡಿ ವ್ಯವಸ್ಥೆ, ಸುಳ್ಯ ಬಸ್‌ಸ್ಟಾಂಡ್, ಹಲವಾರ್ ಬ್ಯಾಂಕುಗಳ್ನ ಸ್ಥಾಪನೆ ಮಾಡ್‌ದನೆಲ್ಲಾ ನೋಡ್‌ಕನ ಸಮಾಜ ಸೇವೆ ಮಾಡಿಕೆ ರಾಜಕೀಯ ಮುಖಂಡರೇ ಆಕಾದ ಅಗತ್ಯ ಖಂಡಿತಾ ಇಲ್ಲೇತ ನಾವ್‌ಗೆ ಸ್ಪಷ್ಟಾಗಿ ಗೊತ್ತಾದೆ.

ಯಾವುದೇ ಭೇದ-ಭಾವ ಮಾಡದೆ ಪ್ರೀತಿಲಿ ಕಾಂಬಂತ ಗುಣವೇ ಇವರ ದೊಡ್ಡತನ, ಅವರ ಸರಳತೆ ಆಶ್ಚರ್ಯ ತರ್‌ಸ್‌ತಿತ್ತ್. ಎಷ್ಟೋ ಗರೀಬರಿಗೆ ದುಡ್ಡ್‌ನ ಸಹಾಯ ಮಾಡಿ ವಿದ್ಯಾಭ್ಯಾಸನ ಕೊಡ್‌ಸಿದವು ಅವು. ಯುವ ಜನಾಂಗನ ಬಾರೀ ಹರ್‌ದುಂಬಿಸ್‌ತಿದ್ದ ಅವು ಯಾರೂ ದುಂದುವೆಚ್ಚ ಮಾಡಿಕಾಗದೂತ ಕೆಮಿ ಮಾತ್ ಹೇಳ್‌ತಿದ್ದೊ. ಉಳಿತಾಯ ನನ್ನ ಯಶಸ್ಸ್‌ನ ಗುಟ್ಟೂತ ಅವ್ ಹೇಳಿಕೊಟ್ಟೊ. ಎಂತದೇ ತಪ್ಪ್ ಮಾಡ್‌ರೂ ಸನ ಅವರ್‌ನ ಪ್ರೀತಿಲಿ ಕ್ಷಮಿಸಿ ಸರಿಯಾದ ದಾರಿನ ತೋರ್‌ಸ್‌ತಿದ್ದೊ. ಯಾರೇ ನೋವ್ ಮಾಡಿರ್‌ಲಿ ಅದ್‌ನ ಮನ್‌ಸ್‌ಗೆ ತಕಂಬದೆ ಮರ್‌ತ್ ಬುಡ್‌ತಿದ್ದೊ. ಅತ್ಯಂತ ನೀತಿವಂತರಾಗಿ ಬದ್‌ಕಿದ ಗೌಡ್ರು ಎಲ್ಲ ರೀತಿಯ

ಕೆಟ್ಟ ಚಟಗಳಿಂದ ದೂರ ಇರೊಕೂತ ಯುವಜನ್‌ರಿಗೆ ಸಲಹೆ ಕೊಡ್‌ತಿದ್ದೊ.

ಕೆಲವು ತಮ್ಮ ಅವ್ವಬಾಸೆಗೆ ಮಾತ್ರ ಒತ್ತ್ ಕೊಟ್ಟ್ ಕಂಡ್ ಬೇರೆ ಬಾಸೆಗಳ್‌ನ ಕಡೆಗಣಿಸುವೆ. ಆದರೆ ಎಲ್ಲಾ ಬಾಸೆಗ ಗೊತ್ತಿದ್ದರೆ ಮಾತ್ರ ನಾವ್ ಬೆಳಿಯಕೆ ಸಾಧ್ಯ. ಜ್ಞಾನಾತ ಹೇಳ್‌ದು ಯಾವ ದಿಕ್ಕ್‌ಂದಾದರೂ ಬರ್‌ಲಿ, ನಾವದನ ಸ್ವೀಕರಿಸಿರೆ ಮಾತ್ರ ನಮ್ಮ ಏಳಿಗೇತ ಹೇಳ್‌ವ ಸತ್ಯನ, ಅಪ್ಪಟ ಅರೆಬಾಸೆನ ಗೌಡ್ರು ಲಾಯ್‌ಕಲಿ ತಿಳ್‌ಕಂಡಿದ್ದೊ. ಹಂಗಾಗಿ ಅವು ಮಾತೃಬಾಸೆನೊಟ್ಟಿಗೆ ಆಂಗ್ಲ ಬಾಸೆ ಕೂಡಾ ವಿದ್ಯಾಬ್ಯಾಸಲಿ ಬೇಕಾದೇತ ಧೈರ್ಯಲಿ ಹೇಳಿ, ಆಂಗ್ಲ ಪುಸ್ತಕಗಳ್‌ನ ಹಳ್ಳಿನ ಮೂಲೆ ಮೂಲೆಗಳ್‌ಲಿರ್‌ವ ಸಾಲೆನ ಗ್ರಂಥಾಲಯಗಳ್‌ಲಿ ಇಸಿಕೆ ಸ್ಟೀಲ್ ಕಪಾಟುಗಳ್‌ನ ಕೊಡ್‌ಸಿದೊ. ತನ್‌ಗೆ ಸಿಕ್ಕದ ವಿದ್ಯಾಬ್ಯಾಸ ಬೇರೆಯವ್‌ಕೆ ಸಿಕ್ಕುವಂಗೆ ಮಾಡ್‌ದ ಇವರ ಹೃದಯ ವೈಶಾಲ್ಯತೆಗೆ ಸಾಟಿಯುಟ್ಟಾ? ಇವ್ ಹೆಚ್ಚಾಗಿ ಓದಿದವಲ್ಲ, ಬೇರೆಯವ್‌ರ್‌ನ ಹೆಚ್ಚು ಓದ್‌ಸಿದವು !

ಕುರುಂಜಿ ಗೌಡ್ರಿಂದಾಗಿ ದೇಸದ ರಾಜಕೀಯ ಮುಖಂಡಂಗ, ದೊಡ್ಡ ದೊಡ್ಡ ಮಠಗಳ ಸ್ವಾಮೀಜಿಗ ಎಲ್ಲವೂ ಬೆರಗ್‌ಗಣ್ಣ್‌ಲಿ ಸುಳ್ಯನ ತಿರ್‌ಗಿ ನೋಡುವಂಗೆ ಆತ್. ವಿದ್ಯಾಬ್ಯಾಸನೇ ಎಲ್ಲರ ಬೊದ್ಕುನ ಏಳಿಗೆಗೆ ದಾರಿದೀಪಾತ ನಂಬಿದ್ದ ಇವ್ ಕೆಟ್ಟಚಟಗಳಿಗೆ ಬಲಿಯಾಗದೆ, ಆತ್ಮವಿಸ್ವಾಸಲಿ ಬಾಳೊಕೂತ ಯುವ ಜನಾಂಗಕ್ಕೆ ಕರೆಕೊಟ್ಟೊ. ಸುಳ್ಯ ತಾಲೂಕ್‌ಲಿ ಇಡೀ ರಾಜ್ಯಲೇ ಮಾದರಿ ಆದಂತ " ಯುವಜನ ಸಂಯುಕ್ತ ಮಂಡಳಿ" ನ ಸ್ಥಾಪಿಸಿದೊ. ಬಹಳಷ್ಟ್ ಯುವಕ, ಯುವತಿ ಮಂಡಳಿಗಳಿಗೆಲ್ಲಾ ಸ್ವಂತ ಕಟ್ಟಡ ಕಟ್ಟಿಕಣಿಕೆ ಸಾಯ ಮಾಡ್‌ದೊ. ಯುವಜನಕಾಗಿ ಸ್ವಂತ ಬಯಲು ರಂಗಮಂದಿರನ ಮಾಡ್‌ಸಿಕೊಟ್ಟೊ. ಎಷ್ಟೇ ವಯಸ್ಸಾದರೂ ಕಡೇ ಮುಟ್ಟ ಮಾಡ್‌ದ ಭಾಷಣಗಳ್‌ಲಿ "I am____years old YOUNG man"ತ ಹೇಳಿಕಂಬ ಹುರ್ಪುನ ಉಳ್‌ಸಿಕಂಡಿದ್ದೊ.

"ನನ್ನ ಶಬ್ದಕೋಸಲಿ ಆದುಲೇತ ಹೇಳ್‌ವ ಪದನೇ ಇಲ್ಲೆ"ತ ಹೇಳ್‌ತಿದ್ದ ಶ್ರೀ ಕುರುಂಜಿಯವು ಹೇಳ್‌ದಂಗೆ ಮಾಡಿ ತೋರ್‌ಸಿದೊ. " ಹೇಳ್‌ದಂಗೆ ಮಾಡಂವ ಕುದ್ದಲ್ಲಿ ಆಳ್‌ದೆ"ತ ಸರ್ವಜ್ಞ ಹೇಳ್‌ದ ಮಾತಿಗೆ ಅಪ್ಪಟ ಉದಾರಣೆ ಇವು. ಪೊರ್ಲುಲಿ ಬಟ್ಟೆ ಬರೆ ಹಾಕಂಡ್, ಮಾತುಕತೆಲಿ ಅದೇ ಶಿಸ್ತ್‌ನ ಕಾಪಾಡಿಕಂಡ್ ಬಂದಿದ್ದೊ. ಅವ್‌ರ ಇಳಿವಯಸ್ಸ್‌ಲೂ ಅದೇ ಚಟುವಟಿಕೆನ ಕಂಡ್ ಯಾರೋ ಇದ್‌ರ ಬಗ್ಗೆ ಕೇಳ್ದೊಗಡ, ಆಗ ಗೌಡ್ರು "ಒಂದ್ ಕೋಣ ನಮ್ಮನ ಬೆನ್ನಟ್ಟಿ ಬಂದರೆ ನಾವ್ ಜೀವನ ಕೈಲಿಟ್ಟು ಓಡುವೆ. ಕಡೇಲಿ ಒಂದ್ ಚರಂಡಿ ಸಿಕ್ಕಿರೆ ಆ ಸಮಯಲಿ ನಾವ್‌ಗೆ ಅದ್‌ನ ಹಾರಿಕೆ ಆದೆನಾ ಇಲ್ಲೆನಾತ ಗ್ಯಾನ ಮಾಡಿಕೇ ಆದುಲೆ. ಹಾರಿಯೇ ಬುಟ್ಟವೆ! ಭರವಸೆನೇ ಎಲ್ಲನ ಮಾಡ್‌ಸಿದೆ"ತ ಹೇಳ್‌ತಾ "ಪರಮಾತ್ಮ ಯಾಗೋಳು ನನ್ನ ಕೈ ಬುಟ್ಟತ್ಲೆ"ತ ಭಕ್ತಿಲಿ ಕುಸಿಲಿ ಆತ್ಮ ವಿಸ್ವಾಸಲಿ ಹೇಳಿಕಣ್‌ತಿದ್ದೊ.

ಸುಳ್ಯನಾಡ್‌ನ ಕಟ್ಟಿದ ನೇತಾರ, ಶಿಕ್ಷಣ ಕ್ರಾಂತಿಯ ಹರಿಕಾರ ಆಗಿದ್ದಂತ ಗೌಡ್ರ್‌ಗೆ

ದೇಸ–ವಿದೇಸಗಳ ಹಲವಾರ್ ಪ್ರಶಸ್ತಿಗ ಬಂದ್ ಸೇರ್‌ದೊ. ರಾಜೀವ್‌ಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ, 'ಗ್ಲೋರಿ ಆಫ್ ಇಂಡಿಯಾ' ಇಂಟರ್ ನ್ಯಾಷನಲ್ ಅವಾರ್ಡ್, ಲಂಡನ್‌ನ 'ಆರ್ಟ್ ಆಫ್ ಇಂಡಿಯಾ ಗೋಲ್ಡ್' ಅವಾರ್ಡ್, ನ್ಯಾಷನಲ್ ಎಜ್ಯುಕೇಷನಲ್ ಎಕ್ಸಲೆನ್ಸ್ ಅವಾರ್ಡ್, ಇಂಡೋ–ನೇಪಾಲ್ ಫ್ರೆಂಡ್‌ಶಿಪ್ ಅವಾರ್ಡ್, ರಾಜೀವಗಾಂಧಿ ಶಿರೋಮಣಿ ಅವಾರ್ಡ್, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಅಮೇರಿಕನ್ ಮೆಡಿಕಲ್ ಆಫ್ ಹಾನರ್ ಅವಾರ್ಡ್, ಮದರ್ ತೆರೇಸಾ ಎಕ್ಸಲೆನ್ಸ್ ಅವಾರ್ಡ್, ಶಿಕ್ಷಣ ಕ್ಷೇತ್ರಲಿ ಸಾಧನೆಗಾಗಿ ಅಮೇರಿಕಾದ ಫ್ಲೋರಿಡಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ ಹಿಂಗೆ ಸುಮಾರು 50 ಕೂ ಹೆಚ್ಚ್ ಪ್ರಶಸ್ತಿಗ, ಇನಾಮುಗ ನಮ್ಮ ಗೌಡ್ರ ಮುಡಿಗೇರಿ ಧನ್ಯತೆನ ಪಡ್‌ಕಂಡೊ. ಅವರ 75 ನೇ ವರ್ಸಲಿ ಸುಳ್ಯಲಿ ನಡ್‌ದ 'ಅಮೃತ ಮಹೋತ್ಸವ'ಕೆ ಬಂದಿದ್ದ ಅಂದ್‌ನ ಉಪಪ್ರಧಾನಿ ಲಾಲ್ ಕೃಷ್ಣ ಅಡ್ವಾಣಿ ಅವ್ ಗ್ರಾಮೀಣ ಪ್ರದೇಸಲಿ ಒಬ್ಬಂಟಿಯಾಗಿ ಅವ್ ಮಾಡ್‌ದ ಸಾಧನೆಗಳ ಕಂಡ್ ಆಶ್ಚರ್ಯ ಆತೂತ ಭಾಷಣಲಿ ಹೇಳ್‌ದ್ ಗೌಡ್ರ ಹಿರಿಮೆಗೆ ಸಾಕ್ಷಿ. "ಬೆಚ್ಚಂಗೆ ಇರಿಕೆ ಒಂದ್ ಮನೆ, ಖರ್ಚಿಗೆ ಕಾಸ್, ಹೇಳ್ದಂಗೆ ಕೇಳ್‌ವ ಹೆಣ್ಣ್" ಇವ್ ಮೂರ್ ಇದ್ದರೆ ಸ್ವರ್ಗದ ಉಸಾಬರಿನೇ ನಾವ್‌ಗೆ ಬೇಡಾತ ಸರ್ವಜ್ಞ ಹೇಳಿತ್ತ್. ಹಿಂಗೆ ಕುರುಂಜಿಯವ್‌ರ ಕರ್ಮಭೂಮಿನ ಸ್ವರ್ಗ ಮಾಡ್‌ದ್ ಅವರ ಹೆಣ್ಣ್ ಕೊಡ್‌ಗ್‌ನ ಮಗಳು ಜಾನಕಿಯವ್. ಅವರ್‌ದು ಸಂತೃಪ್ತಿಂದ ಕೂಡ್ದ ಜಾತಕಾನುಕೂಲ ದಾಂಪತ್ಯ. "ಮನೆ ತೋಟದ ಜವಾಬ್ದಾರಿಕೆ ಎಲ್ಲಾ ನನ್ನ ಹೆಣ್ಣ್‌ದೇ. ಅವ್‌ಳಿಂದಾಗೇ ನಾನ್ ಕಾಲೇಜ್‌ಗಳ್‌ದೆಲ್ಲಾ ಕೆಲ್‌ಸ ನೋಡಿಕಣಿಕೆ ಆಗ್ತಾ ಉಟ್ಟ್. ತೋಟದ ವಿಚಾರಲಿ ನಾ ತಲೆನೇ ಹಾಕುದ್‌ಲೆ"ತ ಹೇಳ್‌ವ ಅವರ ಮಾತ್ ಹೆಣ್ಣ್‌ನ ಮೇಲೆ ಅವ್‌ಕಿದ್ದ ವಿಶ್ವಾಸ, ಗೌರವನ ಎತ್ತಿ ತೋರ್‌ಸಿದೆ. ಪ್ರಪಂಚಲಿ ಯಾಂವ ಹೆಣ್ಣ್‌ಜನಕೆ ಗೌರವ ಕೊಟ್ಟದೆನೋ ಅಂವ ಅವನ ಹೆಣ್ಣ್‌ನ ಗೌರವಿಸಿದೆ. ಯಾರ್ ಮನೇಲಿ ಹೆಣ್ಣ್‌ಗೆ ಗೌರವ ಕೊಟ್ಟದೆನೋ ಅಂವ ಖಂಡಿತಾ ಬೊದ್‌ಕ್‌ಲಿ ಏಳಿಗೆ ಕಂಡದೇತ ಹೇಳ್‌ದ್ ನಿಜದ ಮಾತ್. ಕುರುಂಜಿಯವರ ಮನೆ 'ಅಮರ ಶ್ರೀ'ನ ನಿಭಾಯಿಸ್‌ಕಂಡ್ ತೋಟದ ಇಂಚ್ ಇಂಚ್‌ಲೂ ಕಣ್ಣಾಡಿಸ್‌ಕಂಡ್ ಕೆಲ್‌ಸ ಮಾಡ್‌ಸಿಕಂಡ್ ಗಂಡಂಗೆ ಪ್ರೇರಕ ಶಕ್ತಿಯಾಗಿ ಬದ್‌ಕಿದ ಸಾಧ್ವಿ ಜಾನಕಿ ವೆಂಕಟ್ರಮಣನವು. ಗಂಡ ತನ್ನ ಮೇಲಿಟ್ಟ ನಂಬಿಕೆನ ಉಳ್‌ಸಿಕಂಡ್, ಕೊಟ್ಟ ಗೌರವಕೆ ಹೆಮ್ಮೆ ಪಟ್ಟ್‌ಕಂಡ್, ಪರಿವಾರದೊಟ್ಟಿಗೆ ಲಾಯ್ಕಲಿ ಕುಸೀಲಿ ತೃಪ್ತಿಲಿ ಬಾಳ್‌ದವು ಅವು. ರಾಮಾಯಣಲಿ ರಾಮಂಗೆ ಜಾನಕಿ ಇದ್ದಂಗೆ ಸುಳ್ಯಲಿ ಕುರುಂಜಿಯವ್‌ಕೆ ಈ ಜಾನಕಿ ಇದ್ದೊ.

ಹಿಂಗೆ ಗೌಡ್ರ ಬಗ್ಗೆ ಎಷ್ಟ್ ಬರ್‌ದರೂ ಮುಗಿಯಕಿಲೆ. ಇದ್ ಹೆಂಗೇತ ಹೇಳ್‌ರೆ ಕುರುಡಂಗ ಒಂದು ಆನೆನ ವರ್ಣಿಸಿದಂಗಾದು. ಬರೀ ಆನೆ ಕಾಲ್‌ನ ಮುಟ್ಟಿದವಂಗೆ ಅದ್ ಕಂಬದಂಗೆ ಕಂಡದೆ, ಮೈನ ಮುಟ್ಟಿದವಂಗೆ ಗೋಡೆನಂಗೆ ಕಂಡದೆ. ಬಾಲನ ಹಿಡ್‌ದವಂಗೆ ದೊಣ್ಣೆನಂಗೆ ಕಂಡದೆ, ಕೆಮಿನ ಮುಟ್ಟಿದವಂಗೆ

ತಡ್‌ಪೆನಂಗೆ ಕಂಡದೆ. ಸೊಂಡಿಲ್‌ನ ಮುಟ್ಟಿದವಂಗೆ ಹಾವ್‌ನಂಗೆ ಕಂಡದೆ. ಹಂಗೇ ನಾವೆಷ್ಟೇ ಬರ್‌ದರೂ, ಹೇಳ್‌ರೂ ಕುರುಂಜಿಯವರ ವ್ಯಕ್ತಿತ್ವನ ಪೂರ್ತಿ ವರ್ಣಿಸಿಕೆ ನಮ್ಮ ಕೈಲಿ ಆಕಿಲೆ. ಭೂಮಿ ಮೇಲಿದ್ದ ನೀರ್‌ನೆಲ್ಲಾ ಸೂರ್ಯ ಆವಿನ ರೂಪಲಿ ತಕಂಬೊದು ಪುನ ಈ ಭೂಮಿಗೆ ಮಳೆನ ಸುರ್‌ಸಿಕಾಗಿಯೇ ಹೊರ್‌ತು ಅಂವಗಾಗಿ ಖಂಡಿತಾ ಅಲ್ಲ. ಹಂಗೇ ಪ್ರಪಂಚಲಿ ತಾವ್ ಗಳ್‌ಸಿದ ಶ್ರೀಮಂತಿಕೆನ ವಿದ್ಯಾಭ್ಯಾಸದ ರೂಪಲಿ ಎಲ್ಲವ್‌ಕೂ ಧಾರಾಳಾಗಿ ಹಂಚಿದ ಪುಣ್ಯಾತ್ಮ ಕುರುಂಜಿ ಗೌಡ್ರು. ತಮ್ಮ ಊರ್‌ನವರ– ನೆಂಟರಿಷ್ಟರ ಮಕ್ಕಮರಿಗೆಲ್ಲಾ, ಒಂದೋ ವಿದ್ಯಾಭ್ಯಾಸಕೆ ಹೊರಗೆ ಹೋದು ಇಲ್ಲೇತಾದರೆ ಓದುದರ್‌ನ ಬುಟ್ಟು ಆಳ್‌ಗಳಂಗೆ ದುಡಿಯೊದು, ಎರಡ್ರ್‌ನೂ ಕಂಡ್ ಬೇಜಾರಾಗಿ ಅದ್‌ಕೊಂದ್ ಪರಿಹಾರ ಕಂಡ್ ಹಿಡ್‌ದ್ ಸುಳ್ಯದ 'ಕುರುಂಜಿ ಭಾಗ್'ನ ಪ್ರಪಂಚದ ಎಲ್ಲಾ ಕಡೆಂದನೂ ನೋಡ್‌ವಂಗೆ ಮಾಡ್‌ದೊ. ಈ ಸುಳ್ಯದ ಅಮರ ಶಿಲ್ಪಿ ಕುರುಂಜಿ ವೆಂಕಟ್ರಮಣ ಗೌಡ್ರು ಸಮಾಜಲಿ ಕನ್‌ಸ್‌ನ ಬಿತ್ತಿ, ಕುಸಿನ ಬೆಳದ್, ಕುಸಿಯ ಫಸಲ್‌ನ ಎಲ್ಲವ್ಕೂ ಹಂಚಿ ತಮ್ಮ 78ನೇ ವಯಸ್ಸ್‌ಲಿ 07–08–2013 ರ್‌ಲಿ ಕೇವಲ ದೈಹಿಕ ರೂಪಲಿ ನಮ್ಮಿಂದ ದೂರಾದೊ.





# ಜಾಲ್‌ನ ಲಕ್ಷ್ಮಿ ಶ್ರೀ ತುಳಸಿ

"ಒಂದು ದಳ ಶ್ರೀ ತುಳಸಿ, ಬಿಂದು ಗಂಗೋದಕವು

ಇಂದಿರಾರಮಣನಿಗರ್ಪಿತ ಎನಲು"ತ ದಾಸರುಗ ತುಳಸಿನ ಹಾಡಿ ಹೊಗಳಿಯೊಳೊ. ಮನೆ ಮುಂದೆ ಇರ್‌ವಂತ ತುಳಸಿ ಗಿಡ ಆ ಮನೆಗೆ ದೈವಿಕ ಕಳೆನ ಕೊಟ್ಟದೆ. ರೋಗ ನಿರೋಧಕ ಸಕ್ತಿಗಳ ಖಜಾನೆ ಆದಂತ ತುಳಸಿನ ಮನೆದ್ ಈಶಾನ್ಯ ದಿಕ್ಕ್‌ಲಿ ನೆಟ್ಟ್ ಅದ್‌ರ ಗಾಳಿ ಮನೆಯೊಳಗೆ ಬಾವಂಗೆ ಮಾಡ್‌ರೆ ಬಾರೀ ಒಳ್ಳೆದ್‌ಗಡ.

ಸಮುದ್ರ ಮಂಥನ ಆಕನ ಅಮೃತನ ಪಡಿಯಕೆ ದೇವತೆಗ ಮತ್ತೆ ರಾಕ್ಷಸರ ನಡೂಲಿ ಯುದ್ಧ ಆತ್‌ಗಡ. ಆಗ ಹೊರಗೆ ಬಿದ್ದ ಅಮೃತ ಬಿಂದ್‌ಗ ಸೇರಿ 'ತುಳಸಿ' ಆತೂತ ಹೇಳ್‌ವೆ. ಇನ್ನೊಂದ್ ಕತೆಲಿ ಸಮುದ್ರ ಮಥನ ಮಾಡ್‌ಕನ ಬಂದ 'ಅಮೃತ ಕಳಶ' ಮಹಾವಿಷ್ಣುಗೆ ಸಿಕ್ಕಿದೆ. ಅವಂಗೆ ಕುಸಿ ತಡಿಯಕಾಗದೆ ಆನಂದ ಭಾಷ್ಪ ಉಕ್ಕಿ ಬಂದದೆ. ಇದ್‌ರ ಒಂದ್ ಹನಿ ಕೆಳ್‌ಗೆ ಬಿದ್ದ್ ತುಳ್‌ಸಿ ಆತೂತ ಹೇಳ್‌ವೆ. ಮನೆಲಿ ತುಳಸಿ ಇದ್ದರೆ ಭೂತ, ಪ್ರೇತ, ದುಷ್ಟ ಸಕ್ತಿಗ ಯಾವ್‌ದೂ ಒಳಗೆ ಬಾಲೇತ ನಂಬಿಕೆ.

ಎಲ್ಲಾ ಗಿಡ–ಮರಗ 'ಕಾರ್ಬನ್ ಡೈ ಆಕ್ಸೈಡ್' ನ ತಾವ್ ತಕಂಡ್ ಆಮ್ಲಜನಕನ ಹೊರಗೆ ಬುಟ್ಟವೆ. ಈ ತುಳಸಿ ಗಿಡಂದ ಹೊರ್‌ಡುವ ಎಲ್ಲಾ ಮೊದ್ದ್‌ನ ಅಂಸಗ ಮನ್‌ಸನ ಮತ್ತೆ ಶರ್‌ರದ ಒಳಗೆ ನುಗ್ಗಿ ಬೇರೆ ಬೇರೆ ಕಡೆಂದ ತಯಾರಾಗ್‌ವ 'ಕಾರ್ಬೋನಿಕ್ ಗ್ಯಾಸ್' ನ ಹೊರಗೆ ಹಾಕ್‌ವೆ. ಆಗ ರಕ್ತ ಸಂಚಾರ ಲಾಯ್‌ಕಲಿ ಆಕೆ ಸುರುವಾದೆ. ಶರ್‌ರ, ಮನ್‌ಸ್, ಇಂದ್ರಿಯಗಳ ಕಲ್ಮಶಗ ದೂರಾಗಿ ಚಿಂತೆ, ಸಿಟ್ಟ್, ಹೆದ್‌ರಿಕೆ ಎಲ್ಲಾ ಮಾಯಾಗಿ ನೆಮ್ಮದಿ ಸಿಕ್ಕಿದೆ. ಹೊತಾರೆ ಎದ್ದಂಗೆ ತುಳಸಿ ಕಟ್ಟೆಗೆ ಸುತ್ತು ಬರುವಂತ ಉದ್ದೇಸ ಇದೇ ಆವ್‌ಟ್.

"ತುಳಸಿಯಿಲ್ಲದ ತೀರ್ಥ ಬರೀ ನೀರ್" ತ ಹೇಳ್‌ವೆ. ಇದ್ ಬರೀ ಗಿಡ ಅಲ್ಲ ಎಲ್ಲಾ ಮೊದ್ದುನ ಗುಣಗ ಇರ್‌ದಕೆ ಶ್ರೀ ತುಳಸಿ ಸಂಜೀವಿನಿ. 'ಶ್ರೀ'ತ ಹೇಳ್‌ರೆ ಲಕ್ಷ್ಮಿ. ನಾವ್‌ಗೆ ದುಡ್ಡ್ ಕೊಟ್ಟ್ ಆರೋಗ್ಯನ ತಕಂಬಕಾಲೆ, ಹಂಗಾಗಿ ಆರೋಗ್ಯ ಕಾಪಾಡಿಕಣಿಕೆ ನಾವ್‌ಗೆ ಬೇಕಾದ್ದ್ 'ತುಳಸಿ'ನೇ. "ಸುರಸಾ" ತ ಹೇಳ್‌ವ ಸಂಸ್ಕೃತದ ಹೆಸರ್‌ನೊಟ್ಟಿಗೆ ತುಳಸಿಗೆ ಗ್ರಾಮ್ಯಾ, ಗೌರೀ, ಭೂತಘ್ನೀ, ದೇವದುಂದುಭಿ ತ ಹೇಳ್‌ವ ಹೆಸರ್‌ಗ ಒಳೊ.

ಹರಿಪ್ರಿಯೆ, ವೈಷ್ಣವೀ, ವಿಷ್ಣುವಲ್ಲಭೆ ತ ಹೇಳ್‌ರೂ ತುಳಸಿನೇ. 'ತುಲ'ತ ಹೇಳ್‌ರೆ 'ತಕ್ಕಡಿ'. ಒಂದ್ ತಕ್ಕಡಿಲಿ ತುಳ್‌ಸಿನ ಗುಣಗಳ್‌ನ ತೂಗಿ ಹೇಳಿಕೆ ಖಂಡಿತಾ ಆಲೆ. ಹಂಗಾಗಿ 'ತುಲಸಿ' 'ತುಳಸಿ'ತ ಹೆಸ್‌ರ್ ಬಾತ್‌ಗಡ. ತಕ್ಕಡಿಗೆ ಸಂಬಂಧಿಸಿದಂಗೆ 'ತುಲಸಿ ಮಹಾತ್ಮೆ' ಭಾಗವತದ ಒಂದ್ ಕತೆ ಹಿಂಗುಟ್ಟು. ರುಕ್ಮಿಣಿ–ಸತ್ಯಭಾಮೆಯರ ನೊಡುಲಿ ನಾರದ ಮುನಿ ಒಮ್ಮೆ ಜಗಳ ಹುಟ್ಟ್ ಹಾಕಿತ್. ಯಾರ ಪ್ರೀತಿ ಕೃಷ್ಣನ ಮೇಲೆ ಜಾಸ್ತಿತ ನೋಡೇ ಬುಡಿಕೆ ತೀರ್ಮಾನಾತ್. ತಕ್ಕಡಿನ ಒಂದು ತಟ್ಟೆಲಿ ಶ್ರೀಕೃಷ್ಣ ಪರಮಾತ್ಮ ಕುದ್ದತ್. ಸತ್ಯಭಾಮೆ ಇನ್ನೊಂದ್ ತಟ್ಟೆಗೆ ತಂದ್ ತಂದ್ ತನ್ನ ಒಡವೆಗಳ್‌ನೆಲ್ಲಾ ಸುರ್‌ದರೂ ಸನ ತಟ್ಟೆ ಮೇಲೆ ಬಾತ್‌ಲೆ. ಶ್ರೀಕೃಷ್ಣನ ಉಳ್‌ದ ಹೆಣ್ಣ್‌ಗಳತ್ರ ಇದ್ದಂತ ಒಡವೆಗಳ್‌ನೆಲ್ಲಾ ತಂದ್ ಸುರ್‌ದರೂ ಸನ ತಕ್ಕಡಿ ತಟ್ಟೆ ಮೇಲೆ ಎದ್ದತೇಲೆ, ಕಡೇಲಿ ರುಕ್ಮಿಣಿ ಬಾತ್. ಜಾಲ್‌ಲಿ ಇದ್ದ ತುಳ್‌ಸೀ ದಳನ ತಂದ್ ಭಕ್ತಿಲಿ ನಮಸ್ಕಾರ ಮಾಡಿ ಆ ತಟ್ಟೆಲಿ ಇಟ್ಟತ್. ತಟ್ಟೆಲಿ ತುಳಸಿ ಇಸಿದಂಗೆ ಅದ್ ಮೇಲೆ ಬಾತ್. ಅಂದರೆ ವಜ್ರ–ವೈಢೂರ್ಯಕಿಂತ ತುಳ್‌ಸಿನೇ ಶ್ರೇಷ್ಠತ ನಂಬಿಕೆ.

" ಪ್ರಸೀದ ತುಳಸೀದೇವಿ ಪ್ರಸೀದ ಹರಿವಲ್ಲಭೇ

ಕ್ಷೀರೋದ ಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಮ್ " ತ

ಭಾರತೀಯ ಸಂಸ್ಕೃತಿಲಿ ತುಳ್‌ಸಿಗೆ ಅತ್ಯಂತ ಗೌರವದ ಮತ್ತೆ ಪೂಜನೀಯ ಸ್ಥಾನನ ಕೊಟ್ಟೊಳೊ. ಶ್ರೀಮನ್ನಾರಾಯಣಂಗೆ ಲಕ್ಷ್ಮಿನ ಕಂಡರೆ ಎಷ್ಟ್ ಕುಸಿನೋ ಅಷ್ಟೇ ಪ್ರೀತಿ ತುಳಸಿ ಮೇಲೆಗಡ. ಹಂಗಾಗಿ ಮೂರು ಲೋಕಗಳ್‌ಲೂ ತುಳಸಿಗೆ ಸಮನಾದ್ದ್ ಯಾವ್‌ದೂ ಇಲ್ಲೆ. ತುಳಸಿ ಇಲ್ಲದ ಪೂಜೆನೇ ವ್ಯರ್ಥ. ತುಳಸಿ ಸಿಕ್ಕಿತ್‌ಲೆರೆ ಅದ್‌ರ ಒಣಗಿದ ಕಡ್ಡಿನ ಬೇಕಾರೆ ಉಪಯೋಗಿಸಕ್. ಬೇಕಾರೆ ಹಿಂದ್‌ನ ದಿನದ ತುಳಸಿನೂ ತೊಳ್‌ದ್ ಉಪಯೋಗಿಸಕ್. ಎರಡೂ ಇಲ್ಲೆತೇಳ್‌ರೆ " ತುಳಸೀ ನಾಮ ಸಂಕೀರ್ತನೆ" ಆದರೂ ಮಾಡೊಕು. ದಾಸರ್ ಹೇಳ್ದಂಗೆ,

" ಒಲ್ಲನೋ ಹರಿ ಕೊಳ್ಳನೋ

ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ " ತುಳಸಿ ಇಲ್ಲದ ಪೂಜೆನ ಭಗವಂತ ಸ್ವೀಕರಿಸುದ್‌ಲೆಗಡ.

ತುಳಸಿನ ಎಲೆ, ಮಣ್ಣ್, ತೀರ್ಥ, ದಳ, ಹೂ ಎಲ್ಲನೂ ಪವಿತ್ರ. ಹಾಲ್‌ಲಿ ಹುಟ್ಟಿದ ತುಳಸಿಗೆ ಹಾಲ್‌ಲೇ ಪೂಜೆ ಮಾಡ್‌ರೆ ಬಾರೀ ಕುಸಿಯಾದೆಗಡ. ಪಂಡ್‌ಕಾಲಲಿ ಚೌರದಂಗಡಿಂದ ಬಂದ ಮೇಲೆ ತುಳಸಿ ಕಟ್ಟೆಂದ ಮಣ್ಣ್‌ನ ತೆಗ್‌ದ್ ನೆತ್ತಿಗೆ, ಕುತ್ತಿಗೆಗೆ ಎಲ್ಲಾ ಉಜ್ಜಿಕಂಡ ಮೇಲೆ ಮೀಯೊತಿದ್ದೊಗಡ. ಕತ್ತಿ, ಕತ್ತಿಂದಾದ ಗೀರ್‌ದ ಗಾಯಗ ಎಲ್ಲಾ ಬೇಗ ವಾಸಿಯಾಕೆ ಇದ್ ಒಳ್ಳೆದ್. ತುಳಸಿ ಎಲೆ ಮಣ್ಣ್‌ಲಿ ಬಿದ್ದ್ ಮಣ್ಣಾದರೂ ಸನ ಅದರ ಸಂಜೀವಿನಿ ಸಕ್ತಿಗೆ ಕುಂದಿಲ್ಲೇತ ಹೇಳ್‌ವೆ. ಮನೆ ಸುತ್ತ ತುಳ್‌ಸಿ ಇದ್ದರೆ ಸೊಳ್ಳೆಗ, ಕ್ರಿಮಿ ಕೀಟಗ ಯಾವ್‌ದೂ ಬಾಲೆ. ವರ್ಸಗಟ್ಟಲೆ ಬೊದ್‌ಕುವ ತುಳ್‌ಸಿನ ಬೇರ್, ಗಟ್ಟಿಕಾಂಡನ ಕೊರ್‌ದ್ ತುಳಸೀ ಮಣಿಗಳ್‌ನ ತಯಾರಿಸುವೆ. ಧ್ಯಾನಲಿ ಏಕಾಗ್ರತೆ, ಮನ್‌ಸಿಗೆ ನೆಮ್ಮದಿ ಇದ್‌ರಿಂದಾಗಿ ಸಿಕ್ಕಿದೆ. ಮನ್‌ಸ್‌ನ ಹಂಗೇ ಶರ್‌ರದ ಒತ್ತಡನ ಇದ್ ದೂರ ಮಾಡ್‌ದೆ.

ಬೇರೆ ಬೇರೆ ಜಾತಿಗ ಇದ್ದರೂ ಸನ ತುಳ್‌ಸಿಲಿ ರಾಮ ತುಳಸಿ ಮತ್ತೆ ಕೃಷ್ಣ ತುಳಸೀತ ಎರಡು ವಿಧಗ ಮುಖ್ಯಾಗಿ ನಾವ್ ನೋಡುವೆ. ರಾಮ ತುಳಸಿ ಹಸ್‌ರ್ ಬಣ್ಣಲಿದ್ದ್ ತಂಪು ಕೊಟ್ಟರೆ, ಕೃಷ್ಣ ತುಳಸಿ ಕರಿಬಣ್ಣಲಿದ್ದ್ ಮಳೆಗಾಲ–ಚಳಿಗಾಲಲಿ ದೇಹದ ಉಷ್ಣತೆನ ಹೆಚ್ಚ್‌ಸಿದೆ, ತುಳಸಿನ ಮೊದ್ದು ಜರ, ಸೀತ, ಕೆಮ್ಮುಲು, ಚಕ್ಕಳ ಕಾಯಿಲೆಗಳ್‌ನ ದೂರ ಮಾಡ್‌ದೆ. ಬೊಜ್ಜು, ಸಕ್ಕರೆ ಕಾಯಿಲೆ, ನೆಂಪಿನ ಸಕ್ತಿ, ರಕ್ತದೊತ್ತಡ, ಖಿನ್ನತೆ, ಅಸ್ತಮಾ ಇವ್‌ಕೆಲ್ಲಾ ಸನ ತುಳಸಿ ರಾಮಬಾಣ, ಕೆಮಿಬೇನೆ, ವಾಂತಿ, ಬಿಕ್ಕಳಿಕೆ, ಗ್ಯಾಸ್ಟ್ರಿಕ್ ಸಮಸ್ಯೆ, ಹೃದ್ರೋಗ, ಮಲೇರಿಯಾ, ಎದೆಉರಿ, ಹುಳ–ಹುಪ್ಪಡಿ, ಹಾವು, ಚೇಳು ಕಚ್ಚಿರೆ ವಿಸ ಪರಿಹಾರಕೆ ತುಳಸಿನೇ ಬೇಕಾದೆ.

ಖಾರ, ಕಹಿ ರುಚಿನ ತುಳಸಿ ಉಷ್ಣಕಾರಕ. ಆದರೆ ತುಳಸಿ ಬಿತ್ತ್ ಸಿಹಿ ರಸದ್ದ್, ತಂಪುನ ಗುಣ ಇದ್ರಲುಟ್ಟ್. ಕರಿ ತುಳಸಿ, ಬೆಳಿ ತುಳಸಿ ಇದ್ದರೂ ಸನ ಎರಡರ್‌ಲೂ ಮೊದ್ದುನ ಗುಣಗ ಸಾಮಾನ್ಯಾಗಿ ಒಂದೇ ತರ ಇದ್ದವೆ.

ತ್ರೇತಾಯುಗಲಿ ಶ್ರೀರಾಮ ತುಳಸೀ ವನನೇ ಬೆಳ್‌ಸಿತ್ತ್‌ಗಡ. ಅಶೋಕ ವನಲಿ ಸೀತೆ ತುಳಸೀಗಿಡನ ನೆಟ್ಟ್ ಪೂಜಿಸ್‌ತಿತ್ತ್‌ಗಡ. ಹನುಮಂತ ಲಂಕೆಗೆ ಸೀಮೋಲ್ಲಂಘನ ಮಾಡಿಕೆ ಮುಂದೆ ತುಳಸಿ ಎಲೆಗಳ್‌ನ ತಿಂದಿತ್ತ್‌ಗಡ. ದ್ವಾಪರಯುಗಲಿ ಶ್ರೀಕೃಷ್ಣನ ವೃಂದಾವನಲೂ ತುಳಸಿ ಇತ್ತ್. ಅವಂಗೆ ತುಳಸೀ ಮಾಲೆ ಅಲಂಕಾರತೇಳ್ರೆ ಬಾರೀ ಕುಸಿ. ಹಿಂಗೆ ಸ್ಕಂದ ಪುರಾಣ, ದೇವಿ ಮಹಾತ್ಮೆಗಳ್‌ಲಿ ತುಳಸಿ ಮಹಿಮೆನ ಕೊಂಡಾಡ್ಯೊಳೊ.

ಪುರಾಣಕಾಲಲಿ ಜಾಲಂಧರತ ಹೇಳ್‌ವ ರಾಕ್ಷಸ ಇತ್ತ್‌ಗಡ. ಅವನ ಹೆಣ್ಣ್ ವೃಂದಾ ಬಾರೀ ಪತಿವ್ರತೆಗಡ. ಅವಳ ಆ ಸಕ್ತಿಂದ ತನ್‌ಗೆ ಸಾವೇ ಬಾಕಿಲೇತ ನಂಬಿದ್ದ ಜಾಲಂಧರ, ದೇವತೆಗಳ್‌ಗೆ ಬಾರೀ ಉಪದ್ರ ಮಾಡ್‌ತಿತ್‌ಗಡ. ಆಗ ದೇವತೆಗ ಹೋಗಿ ವಿಷ್ಣುಗೆ ಮೊರೆ ಇಟ್ಟೊ. ಹಂಗಾಗಿ ವಿಷ್ಣು ತನ್ನ ಮಾಯೆಂದ ಜಾಲಂಧರನ ರೂಪಲಿ ಬಂದ್ ವೃಂದನ ಕಣ್ಣಿಗೆ ತಲೆ–ಶರ್‌ರ ಬೇರೆ ಬೇರೆ

ಆದಂಗೆ ಕಾಣ್‌ಸಿಕಣ್‌ತ್. ಅವ್‌ಳು ಗಾಬರಿಲಿ ಮರ್ದ್‌ಕನ ಒಬ್ಬ ಸನ್ಯಾಸಿ ಬಂದ್ ಎರ್‌ಡನೂ ಸೇರ್‌ಸಿ ಕೊಟ್ಟ್ ವಿಷ್ಣುನ ರೂಪಲಿ ಕಾಣ್‌ಸಿಕಣ್‌ತ್. ಆಗ ಗಂಡ ಬೊದ್ಕಿತಲಾತೇಳ್ವ ಕುಸಿಲಿ ವೃಂದಾ ಈ ಸನ್ಯಾಸಿನ ಕಾಲ್‌ಗಳ್‌ನ ಮುಟ್ಟಿ ನಮಸ್ಕಾರ ಮಾಡ್‌ದೆ. ಬೇರೆ ಗಂಡಸ್‌ನ ಪಾದಗಳ್‌ನ ಗೊತ್ತಿಲ್ಲದೇ ಮುಟ್ಟಿ ಹೋದರೂ ಸನ ಪಾತಿವ್ರತ್ಯ ನಾಸ ಆದೆಗಡ. ಆಗ ಶ್ರೀವಿಷ್ಣು ಬಾರೀ ಸುಲಬಲಿ ಜಾಲಂಧರನ ಕೊಂದ್ ದೇವತೆಗಳ ತಾಪತ್ರೆನ ನಿವಾರಿಸಿದೆ. ಈ ಸಮಯಲಿ ಬಾರೀ ಬೇಜಾರ್‌ಲಿ ವೃಂದ ವಿಷ್ಣುನ ಕೇಳ್‌ದೆ, "ನಂಗೆ ಯಾಕೆ ಈ ಅನ್ಯಾಯ? ನನ್ನ ಪಾತಿವ್ರತ್ಯ ನಾಸ ಆಕೆ ಏನ್ ಕಾರಣ?"ತ. ಆಗ ವಿಷ್ಣು " ನಿನ್ನ ಪಾತಿವ್ರತ್ಯಕ್ಕೆ ಎಂತದೂ ಕೇಡಾತ್‌ಲೆ. ಪವಿತ್ರಳಾದ ನೀನ್ ಯುಗ ಯುಗಗಳ್‌ಲೂ ತುಳಸಿಯಾಗಿ ಮುತ್ತೈದೆಯರ್‌ಂದ ಪೂಜೆ ಮಾಡ್‌ಸಿಕಂಡಿರ್ " ತ ಹರ್‌ಸಿತ್.

ಹಂಗಾಗಿ ಕಾರ್ತಿಕ ಮಾಸಲಿ ಉತ್ಥಾನ ದ್ವಾದಶಿನ ದಿನ ತುಳಸಿನ ಮಹಾವಿಷ್ಣುನ ಸನ್ನಿಧಿಲಿ ಪೂಜೆ ಮಾಡ್‌ವೆ. ತುಳಸಿಗಿಡದ ಹಕ್ಕಲೆ ನೆಲ್ಲಿ ಕಾಯಿ ಕೊಂಬೆನ ಮಡ್‌ಗಿ ಹೂಂದ ಅಲಂಕರ್‌ಸಿ, ಮತ್ತಿತರ ಪೂಜೆ ಸಾಮಾನ್‌ಗಳ್‌ನ ಉಪಯೋಗಿಸ್‌ಕಂಡ್ ಪೂಜೆ ಮಾಡಿ ಬೇಡಿಕೊಂಬೊದು ಪದ್ಧತಿಯಾಗಿ ಬಂದುಟು.

**ಮನೆ ಮೊದ್ದಾಗಿ ತುಳಸಿ:**

* ನಾಲ್ಕಾರ್ ತುಳಸೀ ಎಲೆಗಳೊಟ್ಟಿಗೆ ಉಪ್ಪ್ ಹಾಕಿ ಜಗ್‌ದರೆ ಬಾಯಿ ವಾಸನೆ ಹೋದೆ.

* ಒಂದ್ ಚಮ್‌ಚ ಕರಿ ತುಳಸಿ ರಸದೊಟ್ಟಿಗೆ ಯಾಲ ಪುಡಿನ ಬೆರ್‌ಸಿ ಕುಡ್‌ಸಿರೆ ಬೊಸುರಿನ ವಾಂತಿ ನಿತ್ತದೆ.

* ತುಳಸಿ ರಸದ ಬಿಸಿ ಹನಿನ ಕೆಮಿಗೆ ತೊಟ್ಟಿಕ್ಕಿಸಿರೆ ಕೆಮಿ ಬೇನೆ, ಕೀವು ಸುರಿಯೊದು ನಿತ್ತದೆ.

* ತುಳಸಿ ರಸದೊಟ್ಟಿಗೆ ಕಾಯ್ ಹಾಲ್ ಸೇರ್‌ಸಿ ಹೊಟ್ಟೆ ಮೇಲೆ ಉಜ್ಜಿಕಂಡರೆ ಹೆತ್ತಾದ ಮೇಲೆ ಹೊಟ್ಟೆನ ಚಕ್ಕಳಲಿ ಉಳಿವಂತ ಕಲೆ ಹೋದೆ.

* ಕುಡಿಯುವ ನೀರಿಗೆ ತುಳಸಿ ಎಲೆಗಳ್‌ನ ಹಾಕಿ ಇಸಿರೆ ನೀರ್ ಸುದ್ಧ ಆದೆ ಮತ್ತೆ ಬಾಯಾರಿಕೆನೂ ಕಮ್ಮಿಯಾದೆ.

* ಮೀಯಕನ ನೀರಿಗೆ ತುಳಸಿ ಎಲೆ ಹಾಕಿಟ್ಟ್ ಮೀದರೆ ಚಕ್ಕಳ ಕಾಯಿಲ(ಚರ್ಮರೋಗ) ಬಾದುಲೆ. ಕೂಸು ಬಾಣಂತಿಂದ ಹಿಡ್‌ದ್ ಎಲ್ಲವ್‌ಕೂ ಇದ್ ಒಳ್ಳೇದ್.

* ತುಳಸಿ ಇದ್ದರೆ ಸೊಳ್ಳೆ ಬಾಲೆ.

* ತಾಮ್ರದ ಪಾತ್ರೆಲಿಸಿದ ನೀರಿಗೆ ತುಳಸಿ ಎಲೆಗಳ್‌ನ ಹಾಕಿಟ್ಟ್ ಹೊತಾರೆ ಎದ್ದಂಗೆ ಕುಡ್‌ದರೆ ನೆಂಪುನ ಸಕ್ತಿನೂ, ರೋಗ ನಿರೋಧಕ ಸಕ್ತಿನೂ ಜಾಸ್ತಿಯಾದೆ.

* ಅರ್ಧ ಲೀಟರ್ ನೀರಿಗೆ 7–8 ತುಳಸೀ ಎಲೆಗ + ಅರ್ಧ ಚಮಚ ಯಾಲಪುಡಿ
* 1 ಚಮಚ ಕಲ್ಲ್ ಸಕ್ಕರೆ ಸೇರ್‌ಸಿ ಕುದ್‌ಸಿ ಆರ್‌ಸಿದ ನೀರ್‌ನ 2 ಗಂಟೆಗೊಮ್ಮೆ ಕುಡ್‌ದರೆ ಜರ ಕಮ್ಮಿಯಾದೆ.

* ಒಣ್‌ಗಿಸಿ ಪುಡಿ ಮಾಡ್‌ದ ತುಳಸೀ ಎಲೆಗಳ್‌ನ ಸಾಸಿವೆ ಎಣ್ಣೆನೊಟ್ಟಿಗೆ ಬೆರ್‌ಸಿ ಹಲ್ಲುಜ್ಜಿರೆ ಹಲ್ಲುಬೇನೆ ಕಮ್ಮಿಯಾದೆ.

* 8–10 ತುಳಸೀ ಎಲೆಗಳ್‌ನ ಒಂದ್ ಚಮಚ ಜೇನ್‌ತುಪ್ಪದೊಟ್ಟಿಗೆ ಅರ್‌ದ್ ತಕಂಡರೆ ಬಾಯಿ ಹುಣ್ಣು ಹೋದೆ ಮತ್ತೆ ಉರಿಉಚ್ಚೆನೂ ನಿತ್ತದೆ.

* ತುಳಸಿ ಎಲೆ ಮತ್ತೆ ಗಂಧನ ಒಟ್ಟಿಗೆ ಅರ್‌ದ್ ಹಣೆಗೆ ಉಜ್ಜಿಕಂಡರೆ ತಲೆಬೇನೆ ಮನಾರ ಹೋದೆ.

* 5–6 ತುಳಸಿ ಎಲೆ ಮತ್ತೆ ಅಷ್ಟೇ ಪ್ರಮಾಣಲಿ ಪುದಿನ ಎಲೆಗಳ್‌ನ ಸೇರ್‌ಸಿ ಆಗ್‌ದ್ ತಿಂದರೆ ತಿಂಗಳ ಮುಟ್ಟ್‌ನ ಹೊಟ್ಟೆ ಬೇನೆ ಕಮ್ಮಿಯಾದೆ.

ಹಿಂಗೆ ಇನ್ನೂ ಸಾಕಷ್ಟ್ ಆರೋಗ್ಯಫಲನ ಕೊಡುವ ಶ್ರೀ ತುಳಸಿನ ಪೂಜೆಂದ ಪುಣ್ಯಫಲನೂ ಸಿಕ್ಕಿದೆ. ಜನ್ಮ ಜನ್ಮಾಂತರದ ಪಾಪಗಳ್‌ನ ದೂರ ಮಾಡ್‌ವಂತ ಶ್ರೀ ತುಳಸಿನ ಎಲ್ಲಿ ಪೂಜೆ ಮಾಡುವೆನೋ ಅಲ್ಲಿ ತ್ರಿಮೂರ್ತಿಗ ಮತ್ತೆ ಗೌರಿ, ಲಕ್ಷ್ಮಿ ಸಮೇತ 33 ಕೋಟಿ ದೇವಾನುದೇವತೆಗ ನೆಲೆ ನಿತ್ತವೆಗಡ. ಇಂತ ಶ್ರೀ ತುಳಸಿನ ಅನುಗ್ರಹ ಎಲ್ಲರ ಮೇಲೂ ಇರ್‌ಲಿ.





# ಹಸಿ ಹಸಿ ತಿಂದರೆ ಹಾಯಾಗಿರಕ್

ಆರೋಗ್ಯಕೆ ಬೇಕಾದ ಎಲ್ಲಾ ತರದ ಮೊದ್ದು ನಮ್ಮ ಪ್ರಕೃತಿಲೇ ಉಟ್ಟ್. ಅದ್‌ನ ನಾವ್ ಹೆಂಗೆ ಬಳ್‌ಸೊಕೂತ ತಿಳ್‌ಕಂಡರೆ ಖರ್ಚಿಲ್ಲದೆ ನಾವ್ ನಮ್ಮ ಆರೋಗ್ಯದ ಕಾಪಾಡಿಕಣಕ್. ನಮ್ಮ ಒಳ್ಳೆದಕೆ ಬೇಕಾದದನೆಲ್ಲಾ ಪರಮಾತ್ಮ ತಾನೇ ಸೃಷ್ಟಿ ಮಾಡಿ ಇಟ್ಟುಟು. ನಾವ್ ಯಾಗೋಳು ತಿಂಬಂತ ಆಹಾರನೇ ನಾವ್‌ಗೆ ಮೊದ್ದು. ಸರಿಯಾದ ಸಮಯಲಿ, ಸರಿಯಾದ ಪ್ರಮಾಣಲಿ, ಸರಿಯಾದ ಆಹಾರನ ತಕಂಡರೆ ಯಾವ ಕಾಯಿಲೆನೂ ಸಾಮಾನ್ಯಾಗಿ ಬಾದುಲೆ.

ಯಾಗೊಳು ತಿಂಬಂತ ತರಕಾರಿಗ, ಕಾಳ್‌ಗ, ಪೌಷ್ಠಿಕ ಆಹಾರದೊಟ್ಟಿಗೆ ಹಣ್ಣ್‌ಗಳ್‌ನೂ ತಿಂದರೆ ಬಾರೀ ಒಳ್ಳೆದ್. ಪಂಡ್‌ಲೆಲ್ಲಾ ಕಾಡ್‌ಹಣ್ಣ್‌ಗ ಬೇಕಷ್ಟ್ ಸಿಕ್‌ತಿತ್ತ್. ಕಾಡ್ ಕಮ್ಮಿಯಾದಂಗೆ ಅವು ಸನ ಮಾಯಾದೊ. ಕಾಡ್‌ಹಣ್ಣ್‌ಗಾತೇಳ್ರೆ ನಾವ್‌ಗೆ ಗ್ಯಾನಾದು ಚೀಪೆಹಣ್ಣ್. ರಂಜಾಳ ಹಣ್ಣ್, ನೇರಳೆ ಹಣ್ಣ್, ಈಚಲು ಹಣ್ಣ್, ಕೊಟ್ಟೆ ಹಣ್ಣ್, ಕರ್ಮಂಜಿ ಹಣ್ಣ್, ಗುಡ್ಡೆ ಹಣ್ಣ್, ಆಮೆ ಹಣ್ಣ್, ಅತ್ತಿ ಹಣ್ಣ್, ಮಜ್ಜಿಗೆ ಹಣ್ಣ್, ಮೊಟ್ಟೆ ಹಣ್ಣ್, ಸರಳಿ ಹಣ್ಣ್, ಇಡಂಜಿ ಹಣ್ಣ್, ಕಕ್ಕಡೆ ಹಣ್ಣ್, ಕಾರೆ ಹಣ್ಣ್, ನುಚ್ಚಟೆ ಹಣ್ಣ್, ಹಾಲೆ ಹಣ್ಣ್, ಕೂಮೆ ಹಣ್ಣ್, ಇಪ್ಪುಲಿ ಹಣ್ಣ್, ಜೀರ್‌ಗುಳಿ ಹಣ್ಣ್, ಗೊಟ್ಟೆ ಹಣ್ಣ್. ಸೂರ್‌ಲ್ ಹಣ್ಣ್, ಆಜಿನ ಹಣ್ಣ್, ಗುಮ್ಮಟೆ ಹಣ್ಣ್, ಗೊಣ್ಣೆ ಹಣ್ಣ್, ಜಾಕಟೆ ಹಣ್ಣ್, ನೇರ್ಳೆ ಹಣ್ಣ್ ಹಿಂಗೆ ಹೇಳ್‌ತಾ ಹೋದ್‌ರೆ ಉದ್ದ ಬಾಲನೇ ಆದೆ.

ಕಾಡ್‌ಹಣ್ಣ್‌ಗಾತೇಲಿ ನಾವಿದನ ತಾತ್ಸಾರ ಮಾಡುವಂಗೇ ಇಲ್ಲೆ. ಇವ್‌ಗಳ್‌ಲಿ ಮೊದ್ದ್‌ನ ಗುಣಗ ಬಾರೀ ಒಳೊ. ಹಂಗೆನೇ ಪೋಷಕಾಂಸಗನೂ ತುಂಬಿ ತುಳ್‌ಕುವೆ. ನೆಲ್ಲಿಕಾಯಿಲಿ 'ವಿಟಮಿನ್ ಸಿ', ಅಂಜೂರಲಿ ನಾರ್‌ನ ಅಂಸ, ಗುಡ್ಡೆಹಣ್ಣ್‌ಲಿ ಕ್ಯಾರೋಟಿನ್, ಮುರುಗಲ ಹಣ್ಣ್‌ಲಿ ಸಿಟ್ರಿಕ್ ಆಮ್ಲ ಹಿಂಗೆ ಒಂದೊಂದರ್‌ಲಿ

ಒಂದೊಂದ್ ಬೇಕಾದ ಪೋಷಕಾಂಸಗ ಇದ್ದವೆ. ಹಣ್ಣ್‌ಗಳ್‌ನ ಮಾತ್ರ ಅಲ್ಲ, ಆ ಗಿಡ/ಮರದ ಬೇರ್, ತೊಗಟೆ, ಎಲೆ, ಹೂ, ಬಿತ್ತ್‌ಗ ಎಲ್ಲನೂ ಸನ ಬೇರೆ ಬೇರೆ ಕಾಯಿಲೆಗಳ್‌ಗೆ ಮೊದ್ದಾಗಿ ಉಪಯೋಗಿಸ್‌ವೆ. ಈಗ ಇವೆಲ್ಲಾ ಅಪರೂಪ ಆಗಿ ಪೇಟೆಲಿ ಸಿಕ್ಕುವಂತ ಸೇಬು ಹಣ್ಣ್, ಕಿತ್ತ್‌ಳಿಹಣ್ಣ್, ಬಾಳೆಹಣ್ಣ್, ಚಕ್ಕೋತ, ಹಡ್‌ಗ್‌ನ ಕಿತ್ತ್‌ಳಿ (ಮೂಸಂಬಿ), ದಾಳಿಂಬೆ, ಚಿಕ್ಕು, ಬಚ್ಚಂಗಾಯಿ ಹಣ್ಣ್‌ಗಳ್‌ನ ದುಡ್ಡ್ ಕೊಟ್ಟ್ ತಂದ್ ತಿಂಬೊದೇ ಜಾಸ್ತಿ ಆವುಟು.

ನಾವ್ ತರ್‌ಕಾರಿನ ಬೇಸ್‌ಕನ ಅದ್‌ರಲ್ಲಿರ್‌ವ ಹೆಚ್ಚಿನ ಪೋಷಕಾಂಸಗ ನಾಸ ಆದವೆ. ಹಂಗಾಗಿ ಆದಷ್ಟ್ ಹಸಿನೇ ತಿಂದರೆ ಒಳ್ಳೆ ಪ್ರಯೋಜನ ನಾವ್ಗೆ ಸಿಕ್ಕಿದೆ. ಹಂಗೆ ಹಸಿಯಾಗೇ ತಿಂಬಂತ ಹಣ್ಣ್-ತರಕಾರಿಗಳ ಬಗ್ಗೆ ನಾವ್ ತಿಳ್‌ಕಂಬದ್ ಆರೋಗ್ಯ ಕಾಪಾಡಿಕಣಿಕೆ ಒಳ್ಳೆದ್.

**ಬಾಳೆಹಣ್ಣ್:** ಎಲ್ಲಾ ಕಡೆ ಸಿಕ್ಕುವಂತ, ರುಚಿಯಾದ ಕಮ್ಮಿ ಕ್ರಯಕೂ ಸಿಕ್ಕುವಂತ ಹಣ್ಣ್ ಇದ್. ಹೂಬಾಳೆ, ರಸಬಾಳೆ, ಪಚ್ಚೆಬಾಳೆ, ಮರಬಾಳೆ, ಸಾರು ಬಾಳೆ, ಮೈಸೂರು ಬಾಳೆ, ಏಲಕ್ಕಿ ಬಾಳೆ, ಬೂದು ಬಾಳೆ ಹಿಂಗೆ ಸುಮಾರ್ ಹೆಸರ್‌ನ ಬಾಳೆಹಣ್ಣ್‌ಗ ಒಳೊ. ಕಾಡು ಬಾಳೆ ಮತ್ತೆ ಕಲ್ಲು ಬಾಳೆಲಿ ವಿಸೇಸಾದ ಮೊದ್ದಿನ ಅಂಸನೂ ಉಟ್ಟ್.

ಬಾಳೆಹಣ್ಣ್‌ಲಿ 396ಮಿಲಿಗ್ರಾಂಗಿಂತ ಹೆಚ್ಚ್‌ನ ಪೊಟಾಸಿಯಂ ಇರ್‌ದರಿಂದಾಗಿ ಅಧಿಕ ರಕ್ತದೊತ್ತಡ ಮತ್ತೆ ಅದ್‌ಕೆ ಸಂಬಂಧಿಸಿದ ಹೃದಯ ಸಂಬಂಧಿ ಕಾಯಿಲೆಗಳ್‌ನ ದೂರ ಇಸಿದೆ. ಲಕ್ವ ಬಾರದಂಗೂ ನೋಡಿಕಂಡದೆ. ಹೊಟ್ಟೆ ಒಳಗೆ ಹುಣ್ಣಾಗದಂಗೂ ತಡ್‌ದದೆ. ಎದೆಉರಿ, ಅಜೀರ್ಣ ಬಾರದಂಗೆ ಮಾಡ್‌ದೆ. ಇದರ್‌ಲಿರ್‌ವ ರಾಸಾಯನಿಕ ವಸ್ತುಗಳಿಗೆ ಬ್ಯಾಕ್ಟೀರಿಯಾಗಳ್‌ನ ಕೊಲ್ಲುವಷ್ಟ್ ಸಕ್ತಿ ಉಟ್ಟ್. ಉಂಡ ಮೇಲೆ ತಿಂಬೊದು ಜೀರ್ಣಸಕ್ತಿ ಹೆಚ್ಚಾಕೆ ಬಾರೀ ಒಳ್ಳೆದ್ .

**ಬಚ್ಚಂಗಾಯಿ ಹಣ್ಣ್:** ಬಾರೀ ನೀರಿನಂಸ ಇದರ್‌ಲಿ ಉಟ್ಟ್. ಕ್ಯಾನ್ಸರ್ ಮತ್ತೆ ಹೃದಯ ರೋಗನ ಕಮ್ಮಿ ಮಾಡ್‌ದೆ. ರಕ್ತದೊತ್ತಡಕೂ ಇದ್ ಒಳ್ಳೆದ್. ಈ ಹಣ್ಣ್‌ಲಿ ಕಮ್ಮಿ ಕ್ಯಾಲೋರಿ ಮತ್ತೆ ಕೊಬ್ಬು ಸನ ಕಮ್ಮಿ ಇರ್‌ದಕಾಗಿ ಎಲ್ಲವೂ ಇದ್‌ನ ತಿನ್ನಕ್, ಬೇಸಿಗೆಲಿ ಶರ್‌ರನ ತಂಪ್ ಮಾಡಿಕೆ ಇದ್ ಸಹಾಯ ಮಾಡ್‌ದೆ. ಇದರ ಜ್ಯೂಸ್ ಬಾರೀ ಲಾಯ್‌ಕ.

**ಕಿತ್ತುಳಿ ಹಣ್ಣ್:** ಕೋಡ ಕಿತ್ತುಳಿ, ಹಡ್‌ಗುನ ಕಿತ್ತುಳಿ (ಮೂಸಂಬಿ), ಮಾದ್ರುಳಿ, ಚಕ್ಕೋತ ಎಲ್ಲಾ ಬೇರೆ ಬೇರೆ ವಿಧಗ. ಇದರ್‌ಲಿ 'ವಿಟಮಿನ್ ಸಿ' ತುಂಬ್ಯುಟು. ಕೊರೋನಾ ಕಾಲಲಿ ಅದ್ ಬಾರದಂಗೆ ತಡಿಯಕೆ ಎಲ್ಲವೂ ದಮ್ಮುಗಟ್ಟಿ ಇದ್‌ನ ತಿಂಬೊತಿದ್ದೊ! ಇದರ್‌ಲಿರುವ 'ಆಂಟಿ ಆಕ್ಸಿಡೆಂಟ್' ಚಕ್ಕಳಕೆ ಬಾರೀ ಒಳ್ಳೆದ್. 70 ಮಿಲಿಗ್ರಾಂ ನಷ್ಟ್ 'ವಿಟಮಿನ್ ಸಿ' ಇರ್‌ದಕೆ ರೋಗ ನಿರೋಧಕ ಸಕ್ತಿನ ಹೆಚ್ಚ್‌ಸಿದೆ. ಆಹಾರಲಿರ್‌ವ ಕಬ್ಬಿಣಾಂಸ ತಡಿಗೆ ಸೇರಿಕೆ ಕಿತ್ತುಳಿ ತಿಂದರೆ ಒಳ್ಳೆದಾದೆ. ಹಂಗಾಗಿ

ಹೆಣ್ಣ್ ಜನ ಹೆಚ್ಚಾಗಿ ತಕೊಣೊಕು. ಜೀರ್ಣಕ್ರಿಯೆನೂ ಇದ್ ಜಾಸ್ತಿ ಮಾಡ್‌ದೆ.

**ಬಪ್ಪಂಗಾಯಿ/ಪಪ್ಪಾಯಿ ಹಣ್ಣ್:** ಸಾಮಾನ್ಯಾಗಿ ಮನೆ ಹಿತ್ತಲ್‌ಲಿ, ತೋಟಗಳ್‌ಲಿ ತಾನೇ ಹುಟ್ಟಿ ಬೆಳ್‌ದ್ ರುಚಿನೊಟ್ಟಿಗೆ ಶರ್‌ರಕೆ ಸಕ್ತಿನ ತುಂಬಿದೆ. ಆರೋಗ್ಯನೂ ಲಾಯ್‌ಕಲಿದ್ದದೆ. ಇದ್‌ನ ತಿಂಬೊದರಿಂದ ಆದ ಗಾಯಗ ಬೇಗ ವಾಸಿಯಾದವೆ. ನೆತ್ತ್‌ಲಿರ್‌ವ ಕೊಲೆಸ್ಟ್ರಾಲ್ ಅಂಸನ ಇದ್ ಕಮ್ಮಿ ಮಾಡ್‌ದೆ. ಇದ್‌ನ 'ಬಪ್ಪಂಗಾಯಿ' ತನೂ ಕರ್‌ದವೆ.

**ಚೋಳಿ ಹಣ್ಣ್:** ಮನೆ ಹಿತ್ತ್‌ಲ್‌ಲಿ ಮತ್ತೆ ತೋಟಗಳ್‌ಲಿ ನೊಡು ನೊಡುಲಿ ನೆಟ್ಟ್ ಬೆಳ್‌ಸುವೆ. ಮುಟ್ಟಾದು ನಿತ್ತ ಹೆಣ್ಣ್‌ಜನ್‌ರ್‌ಲಿ ಕ್ಯಾಲ್ಸಿಯಂ ಕಮ್ಮಿಯಾಗಿ " ಟೊಳ್ಳು ಮೂಳೆ ರೋಗ" ಬಂದರೆ ಇದ್‌ಕೆ ಚೋಳಿ ಹಣ್ಣ್ ಒಳ್ಳೆ ಮೊದ್ದು. ಊಟ ಆದ ಮೇಲೆ ಇದ್‌ನ ತಿಂದರೆ ಜೀರ್ಣ ಲಾಯ್‌ಕಲಿ ಆದೆ. ಮೂಳೆಗಳ್‌ನ ಗಟ್ಟಿ ಮಾಡಿಕೆ ಹೇಳ್‌ದ ಹಣ್ಣ್ ಇದ್. ಜಾಮ್, ಪಾಯಸ, ಸಲಾಡ್, ಜ್ಯೂಸ್, ಗೈಪುಲಿ ಸನ ಇದ್‌ನ ಬಳ್‌ಸುವೆ.

**ದಾಳಿಂಬೆ:** ಯಾರಿಗೆ ನೆತ್ತ್ ಕಮ್ಮಿ ಉಟ್ಟೋ ಅವ್‌ಕೆ ಇದ್ ರಾಮಬಾಣ. ನಾರಿನಂಸ, 'ವಿಟಮಿನ್ ಸಿ' ಧಾರಾಳಾಗಿ ಉಟ್ಟ್. ಹಂಗೆನೆ ಪೊಟಾಸಿಯಂ, ಖನಿಜಗ ಸನ ಇದರ್‌ಲಿ ಉಟ್ಟ್. ಹೃದಯ, ಕರುಳು, ಜೀರ್ಣಾಂಗ ಎಲ್ಲದರ ಕಾಪಾಡಿಕಂಡದೆ. ವೈರಲ್ ಸೋಂಕುನ ವಿರುದ್ಧನೂ ಹೋರಾಡ್‌ದೆ.

**ಗೇರ್ ಹಣ್ಣ್:** ಶರ್ಕರ ಪಿಷ್ಟ, ಸಸಾರಜನಕ, ಕೊಬ್ಬು, ಕ್ಯಾಲ್ಸಿಯಂ, ರಂಜಕ, ಬಿ ಒನ್ ವಿಟಮಿನ್, ಬಿ ಟು ವಿಟಮಿನ್, ಸಿ ವಿಟಮಿನ್‌ಗ ಧಾರಾಳಾಗಿ ಇದರ್‌ಲಿ ಒಳೊ. ಗೂಡೆಗಳ್‌ನ ಕಾಡುವ ಮುಟ್ಟಿನ ಬೇನೆ ಕಮ್ಮಿಯಾಕೆ ಗೇರುಹಣ್ಣ್‌ನ ರಸಕೆ ಜೇನುತುಪ್ಪ ಸೇರ್‌ಸಿ ಯಾಗೋಳ್ ತಕಣೊಕು. ಒಂದೆರಡ್ ಚಮ್‌ಚ ಗೇರು ಸರಾಯಿನ ಯಾಗೋಳ್ ಕುಡಿಯೊದು ಅಸ್ತಮಾ ಕಾಯಿಲೆಗೆ ಮತ್ತೆ ಬಾಣಂತಿಗೆ ಒಳ್ಳೆದ್.

**ಸೀತಾಫಲ:** ಬಾರೀ ಪಿಷ್ಟಾಂಸ ಇರ್‌ವಂತ ಹಣ್ಣ್, ಹಂಗಾಗಿ ಸುಲಬಲಿ ಜೀರ್ಣಾಲೆ. ಬಾಣಂತಿಗ ತಿಂದರೆ ಸಕ್ತಿ ಬಾಕೆ ಒಳ್ಳೆದ್. ಈ ಹಣ್ಣ್‌ನ ತಿರುಳ್‌ಗೆ ಹಾಲ್ ಬೆರ್‌ಸಿಕಂಡ್ ಕುಡಿಯೊದು ಒಳ್ಳೆದ್.

**ರಾಮಫಲ:** ಸೀತಾಫಲ ಚೂರು ನೀರ್–ನೀರ್ ಇದ್ದರೆ ರಾಮಫಲ ಬಾರೀ ರುಚಿನ ಹಣ್ಣ್. ಇದ್‌ನ ತಿಂಬೊದರಿಂದ ಶರ್‌ರದ ಉಷ್ಣತೆನ ಕಾಪಾಡಿಕಣಕ್ ಮತ್ತೆ ವಿಟಮಿನ್‌ಗಳ್‌ನ ಸನ ತಡಿಗೆ ಸೇರ್‌ಸಿಕಣಕ್.

**ಲಕ್ಷ್ಮಣ ಫಲ:** ಹೃದಯದ ಆಕಾರಲಿ ಇರ್‌ವಂತ ಈ ಹಣ್ಣ್‌ನ ಮೇಲೆ ಸಣ್ಣ ಸಣ್ಣ ಮೆತ್ತನೆ ಇರ್‌ವಂತ ಮುಳ್ಳುಗ ಇದ್ದವೆ. ಈ ಹಣ್ಣ್‌ಲಿ ಮತ್ತೆ ಇದ್‌ರ ಎಲೆಲಿ ಮೊದ್ದ್‌ನ ಅಂಸ ತುಂಬಾ ಉಟ್ಟ್. "ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಕ್ಯಾನ್ಸರ್"

ಸಂಸ್ಥೆ ಕ್ಯಾನ್ಸರ್ ಕಾಯಿಲೆನ ಇದ್ ಹಿಡ್‌ತಲಿ ಇಟ್ಟದೆ ಮತ್ತೆ ಕ್ಯಾನ್ಸರ್ ಕಾಯಿಲೆನ ವಾಸಿ ಮಾಡ್‌ದೇತ ಹೇಳ್ಯೊಳೊ. ಈ ಹಣ್ಣ್‌ನ ಹಂಗೆನೇ ತಿನ್ನೊಕು ಇಲ್ಲಾತಾದರೆ ಜ್ಯೂಸ್ ಮಾಡಿನೂ ಕುಡಿಯಕ್. ಸಂಧಿವಾತ, ಬೆನ್ನುಬೇನೆ, ರಕ್ತದೊತ್ತಡ, ಸಕ್ಕರೆ ಕಾಯಿಲೆನ ಕಮ್ಮಿ ಮಾಡ್‌ದೆ. ದೇಹಕೆ ಸಕ್ತಿ ಕೊಟ್ಟದೆ. ತಲೆಹೊಟ್ಟು, ಸೀಳು ಕೂದಲು, ಕೂದಲು ಉದ್‌ರುದು ಎಲ್ಲಾ ಸರಿಯಾದೆ. ಇದ್‌ರ ಎಲೆಗಳ್‌ಲಿ ಹೆಚ್ಚಿನ ಪ್ರೋಟಿನ್, ಕ್ಯಾಲ್ಸಿಯಂ, ವಿಟಮಿನ್ ಎ ತುಂಬಾ ಉಟ್ಟ್. ಈ ಹಣ್ಣ್ ಸಿಕ್ಕುದು ಬಾರೀ ಅಪರೂಪ.

**ಬೀಟ್ರೂಟ್:** ಕ್ಯಾನ್ಸರ್ ವಿರುದ್ಧ ರಕ್ಷಣೆ ಕೊಡುವಂತ ಈ ಗೆಡ್ಡೆ ನೆತ್ತ್‌ನ ಜಾಸ್ತಿ ಮಾಡ್‌ದೆ. ಹಸಿ ತಿಂಬದರಿಂದ ಪೊಟಾಸಿಯಂ, ಕ್ಯಾಲ್ಸಿಯಂ, ಕಬ್ಬಿಣಾಂಸ ಎಲ್ಲನೂ ಲಾಯ್‌ಕಲಿ ಸಿಕ್ಕಿದೆ. ಇದನ ಹಂಗೆನೂ ತಿನ್ನಕ್, ಮೊಸ್ರು ಬಜ್ಜಿನೂ ಮಾಡಕ್, ಜ್ಯೂಸ್ ಮಾಡಿ ಕುಡಿಯಕ್. ಮೂಲಂಗೆ, ನೂಲ್‌ಕೋಲು, ಗೆಣ್‌ಸ್‌ಗ ಹಿಂಗೆ ಹಸಿ ಹಸಿ ತಿಂಬಂತ್ತದ್ ಬೇಕಷ್ಟ್ ಉಟ್ಟ್.

**ಕ್ಯಾರೆಟ್:** ಕ್ಯಾರೆಟ್‌ಲಿರ್‌ವ 'ವಿಟಮಿನ್ ಎ' ಕಣ್ಣಿಗೆ ಬಾರೀ ಒಳ್ಳೆದ್. ನಾರಿನಂಸ ಧಾರಾಳಾಗಿ ಇರ್‌ದಕೆ ಮಲಬದ್ಧತೆನೂ ದೂರ ಆದೆ. 'ಬೀಟಾ ಕೆರೋಟಿನ್' ಇದರ್‌ಲಿ ಇರ್‌ದರಿಂದಾಗಿ ಕ್ಯಾನ್ಸರ್ ಮತ್ತೆ ಹೃದಯದ ಕಾಯಿಲೆಗಳ್‌ಗೆ ಮೊದ್ದು ಇದ್.

**ಬೆಂಡೆಕಾಯಿ:** ಬೆಂಡೆಕಾಯಿನ ಹಸಿ ತಿಂಬೊದು ಸ್ವಲ್ಪ ಕಷ್ಟನೇ ಆದರೂ ಸನ ಇದರ್‌ಲಿರುವ ನಾರಿನಂಸ ಕೊಲೆಸ್ಟ್ರಾಲ್‌ನ ಕಮ್ಮಿ ಮಾಡ್‌ದೆ. ಸಕ್ಕರೆ ಕಾಯಿಲೆಗಂತೂ ಇದ್ ರಾಮಬಾಣದಂಗೆ ಕೆಲ್‌ಸ ಮಾಡ್‌ದೆ. ಬೆಂಡೆಕಾಯಿನ ತುದಿ ಮತ್ತೆ ಬುಡನ ಚಾಕ್‌ಲಿ ತುಂಡ್ ಮಾಡೊಕು. ಆಗ ಅದರ್‌ಲಿ ಬಾವಂತ ನೋಳಿನ ಸಮೇತ ನೀರ್‌ನ ಗಲಾಸಲಿ ಹಾಕಿ ಇರ್ಲಿಡೀ ಇಸೊಕು. ಹೊತಾರೆ ಎದ್ದಂಗೆ ಬೆಂಡೆಕಾಯಿನ ನೀರ್‌ಂದ ತೆಗ್‌ದ್ ಆ ನೀರ್‌ನ ಕುಡಿಯೊಕು. ಇದ್ ಸಕ್ಕರೆ ಕಾಯಿಲೆಗೆ ಮೊದ್ದು.

ಇದರ್‌ಲಿ ಕ್ಯಾಲ್ಸಿಯಂ, ಪೊಟಾಸಿಯಂ, ವಿಟಮಿನ್ ಎ, ಸಿ, ಇ, ಕಬ್ಬಿಣಾಂಸಗ, ಫೋಲಿಕ್ ಆಸಿಡ್‌ಗೆಲ್ಲಾ ಒಳೊ. ಬೀಟಾ ಕೆರೋಟಿನ್ ಸನ ಉಟ್ಟ್. ಕಣ್ಣ್‌ನ ದೃಷ್ಟಿಗೆ, ಕಿಡ್ನಿ ಕಾಯಿಲೆಗೆ ಒಳ್ಳೆದ್. ಕಿವಿಹಣ್ಣ್‌ಲಿ ಸಿಕ್ಕುವಂತ ಎಲ್ಲಾ ಪೋಷಕಾಂಸಗ ಇದರ್‌ಲಿ ಉಟ್ಟ್.

ಬಾರೀ ಅಪರೂಪದ 'ವಿಟಮಿನ್ ಕೆ' ಸನ ಇದರ್‌ಲಿ ಇರ್‌ದಕೆ ಶ್ವಾಸಕೋಸನ ಇದ್ ಕಾಪಾಡಿಕಂಡದೆ.

**ಮಾವಿನ ಹಣ್ಣ್:** ನೀಲಂ, ತೋತಾಪುರಿ, ರಸಪುರಿ, ಬಾದಾಮಿ, ಬಂಗನಪಲ್ಲಿ, ನಾದನ್, ಸಿಂಧೂರಿ, ಮಲ್‌ಗೋವಾ, ಮಲ್ಲಿಕಾ ಹಿಂಗೆ ತಾರಾಮಾರ ರುಚಿನ ಹಣ್ಣ್‌ಗ ಮತ್ತೆ ಜಾತಿಗ ಒಳೊ. ಕೊಡ್‌ಗ್‌ಲಿ ಕಾಡ್‌ಮಾವಿನ ಹಣ್ಣೂ ಸಿಕ್ಕಿದೆ.

**ನೀರ್‌ಸೋಂತೆಕಾಯಿ:** ಇದ್ ಹಸ್‌ರಾಗಿದ್ ತಿಂಬಕೆ ರುಚಿಯಷ್ಟೇ ಅಲ್ಲ, ಇದ್ ಸಾಮಾನ್ಯ ಕಾಯಿಲೆಂದ ಹಿಡ್‌ದ್ ದೊಡ್ಡ ಕಾಯಿಲೆಗೂ ರಾಮಬಾಣ. ಇದರ್‌ಲಿ 95 ಪರ್ಸೆಂಟ್ ನೀರ್‌ನಂಸ ಇರ್‌ದಕೆ ಬೇಸಿಗೆಲಿ ತಿಂದರೆ ಬಾರೀ ಒಳ್ಳೆದ್. ತಡಿಲಿ ನೀರ್‌ನ ಅಂಸನ ಕಾಪಾಡಿಕಂಡದೆ. ಪೊಟ್ಯಾಸಿಯಂ, ನಾರಿನಂಸ, ಮ್ಯಾಗ್ನೇಶಿಯಂ ಇತ್ಯಾದಿ ಪೌಷ್ಠಿಕಾಂಸಗ ಇದರ್‌ಲಿ ಇರ್‌ದಕೆ ರಕ್ತದೊತ್ತಡನ ಕಮ್ಮಿ ಮಾಡ್‌ದೆ. ಉಚ್ಚೆ ಜಾಸ್ತಿಯಾಗಿ ತಡಿಲಿರ್‌ವ ಕಲ್ಮಸಗೆಲ್ಲಾ ಹೊರಗೆ ಹೋಗುವಂಗೆ ಮಾಡ್‌ದೆ. ಚಕ್ಕಳದ ತಾಜಾತನನ ಉಳ್‌ಸಿದೆ. ಬಿಸ್‌ಲಿಂದ ಮೊಕನ ರಕ್ಷಿಸಿದೆ. ಸೋಂತೆರಸನ ಮೊಕಕೆ, ಕಣ್ಣ್‌ನ ಸುತ್ತ ಉಜ್ಜಿಕಂಡರೆ ಕಪ್ಪುಕಲೆಗ, ಕಣ್ಣ್ ಸುತ್ತ ಇರ್‌ವ ಕಪ್ಪು ವೃತ್ತ, ಉಬ್ಬಿಕಂಡಿರುವ ಚಕ್ಕಳ ಕಮ್ಮಿಯಾದೆ.

ಬೇರೆ ಬೇರೆ ಗಿಡಗಳ ಕೊಡಿಗಳ್‌ನ ಹಸಿಯಾಗೇ ಉಪಯೋಗಿಸ್‌ಕಂಡ್ ರುಚಿಯಾದ ತಂಬುಳಿ ಮಾಡಿ ತಿಂಬೊದ್ ಒಳ್ಳೆ ಆಹಾರ ವಿಧಾನ. ಪೇರಳೆ ಕೊಡಿ, ಗೇರ್ ಕೊಡಿ, ನೇರಳೆ ಕೊಡಿ, ಗಿಣ್‌ಕೆ ಕೊಡಿ, ತಿಮರೆ, ದಾಸವಾಳ ಕೊಡಿ ಎಲ್ಲನೂ ತಂಬುಳಿಗೆ ಉಪಯೋಗಾದೆ. ಹೊಟ್ಟೆ ಹುಣ್ಣ್‌ನ ಸನ ಇದ್ ಗುಣ ಮಾಡ್‌ದೆ. ತಿಮರೆ, ಮಕ್ಕಳ ಬುದ್ಧಿ ಸಕ್ತಿನ, ನೆಂಪುನ ಸಕ್ತಿನ ಹೆಚ್ಚ್ ಮಾಡ್‌ದೆ. ಗೇರ್‌ಕೊಡಿನ ಅಗ್‌ದರೆ ಬಾಯಿಹುಣ್ಣು ಹೋದೆ. ಗರಿಕೆ ಕೊಡಿನ ಜಜ್ಜಿ ಬೊಂಡದ ನೀರ್‌ಲಿ ಒಂದ್ ಗಂಟೆ ನೆನ್‌ಸಿಟ್ಟ್ ಸೋಸಿ ಕುಡ್‌ದರೆ ಸರ್ಪಸುತ್ತ್ ಗುಣಾದೆ. ದಾಸವಾಳ ಕೊಡಿನ ಬೆಳ್ತಕ್ಕಿನೊಟ್ಟಿಗೆ ಕಡ್‌ದ್ ದೋಸೆ, ರೊಟ್ಟಿ ಮಾಡಿ ತಿಂದರೆ ರುಚಿನೂ ಆದೆ, ಆರೋಗ್ಯಕೂ ಒಳ್ಳೆದ್.

ನೆಲನೆಲ್ಲಿ ಕೊಡಿನ ಹಸುನ ಹಾಲ್‌ಲಿ ಅರ್‌ದ್ ಕುಡ್‌ದರೆ ಪಿತ್ತಂದ ಬಾವ ತಲೆಸುತ್ತ್ ಕಮ್ಮಿಯಾದೆ. ತುಂಬೆ ಹೂಗಳ್‌ನ ಜಜ್ಜಿ ರಸ ತೆಗ್‌ದ್ ಒಂದೊಂದ್ ಹನಿನ ಮೂಗ್‌ನ ಹೊಳ್ಳೆಗಳಿಗೆ ಹೊತಾರೆ ಎದ್ದಂಗೆ 3 ದಿನ ಹಾಕಂಡಿದ್ದರೆ ತಲೆಬೇನೆ ಓಡಿ ಹೋದೆ.

ಎಲ್ಲಾ ಕೊಡಿಗಳ್‌ಗೆ ಉಪ್ಪು, ಜೀರಿಗೆ, ಒಣಮೆಣ್‌ಸ್ ಹಾಕಿ ಹೊರ್‌ಕಂಡ್ ಕಾಯಿತುರಿನ ಹಾಕಂಡ್ ಕಡ್‌ದ್ ಮಜ್ಜಿಗೆ ಸೇರ್‌ಸಿ ಒಗ್ಗರಣೆ ಕೊಟ್ಟರೆ ಗಮನ ಬಾವಂತ ತಂಬುಳಿ ತಯಾರಾದೆ.

ಹಿಂಗೆ ಹಸಿಯಾಗೇ ತಿಂಬಂತ ಎಷ್ಟೋ ತರಕಾರಿಗಳ್‌ನ ತಿಂದ್ ನಾವೆಲ್ಲವೂ ಆರೋಗ್ಯನ ಲಾಯ್ಕಲಿ ಕಾಪಾಡಿಕಂಡ್ ಹಾಯಾಗಿರ್‌ನೊ.





# ನಿಂಬುಳಿನ ನಾವ್ ನಂಬಕ್

ಸಾಮಾನ್ಯಾಗಿ ಯಾಗೋಳು ಎಲ್ಲರ ಮನೆಗಳ್‌ಲೂ ಉಪಯೋಗಿಸುವಂತ ನಿಂಬುಳಿಗೆ ಬಾರೀ ಬೇಡಿಕೆ ಬಂದದ್ "ಕೋವಿಡ್ 19" ತೇಳ್ವ ಮಹಾಮಾರಿ ಬಂದ ಮೇಲೆನೆ ! ಯಾಗ ವಿಟಮಿನ್ ಸಿ ಕೊರೋನಾ ಕಾಯಿಲೆಗೆ ರಾಮಬಾಣಾತ ಗೊತ್ತಾತೋ ಅಲ್ಲಿಂದ ಎಲ್ಲವೂ ನಿಂಬುಳಿನ ಹಿಂದೆ ಬಿದ್ದೊ. ಹಣ್ಣ್‌ತ ಕರ್‌ದರೂ ಸನ ನಿಂಬುಳಿನ (ನಿಂಬೆ ಹಣ್ಣೂತ ಕನ್ನಡಲಿ ಕರ್‌ದವೆ) ಕಚ್ಚಿ ಕಚ್ಚಿ ತಿಂಬಕಾಲೆ. ಅಡಿಗೆಗೆ, ಜ್ಯೂಸ್ ಮಾಡಿ ಕುಡಿಯಕೆ ನಾವೆಲ್ಲಾ ಬಳಸ್‌ವಂತ ನಿಂಬುಳಿದ್ ಬೇರೆ ಗುಣಗಳ್‌ನ ಕೇಳರೆ ನೀವ್‌ಗೆಲ್ಲಾ ಆಶ್ಚರ್ಯ ಆದು. ಅದ್‌ಕೇ ನಿಂಬುಳಿಗೆ 'ಬಹೂಪಯೋಗಿ ನಿಂಬೆ' ತನೂ ಹೇಳ್‌ವೆ.

1)ದೊಂಡೆ ಪಸೆ ಆರ್‌ದವ್‌ಕೆ ನಿಂಬುಳಿ ಸರಬತ್ತ್ ಸಿಕ್ಕಿರೆ ಸ್ವರ್ಗಸುಖ.

2)ಅಜೀರ್ಣ ಆದವ್‌ಕೆ ನಿಂಬುಳಿ ರಸನ ನೀರ್‌ಲಿ 5–6 ಸಲ ಕುಡ್‌ಸಿರೆ ಉಸಾರಾದವೆ. ಹಂಗೆನೇ ಹುಳಿತೇಗು ಬಾದೂ ನಿತ್ತದೆ.

3)ನಿಂಬುಳಿನ ಹಿಂಡಿ ಅದ್‌ಕೆ ಕಲ್ಲ್‌ಸಕ್ಕರೆ ಹಾಕಿ ಕುಡ್‌ದರೆ ವಾಂತಿ ನಿತ್ತದೆ. ವಾಹನ ಹತ್ತ್‌ಕನ ವಾಂತಿಯಾಗುವವ್‌ಕೆ ಇದ್ ಬಾರೀ ಒಳ್ಳೆದ್.

4)ಅರ್ಧ ಗಲಾಸ್ ನೀರಿಗೆ ಅರ್ಧ ಹೋಳು ನಿಂಬುಳಿ ಹಿಂಡಿ ಚಿಟಿಕೆ ಉಪ್ಪುನ ಹಾಕಿ ಕುಡ್‌ದರೆ ಉರಿಉಚ್ಚೆ ಮಾಯಾದೆ.

5)ಕೆಲವ್‌ಕೆ ತಿಕಲಿ ತುರಿಕೆ ಎದ್ದದೆ. ಹೇಳಿಕೂ ಅಲ್ಲ, ಬುಡಿಕೂ ಅಲ್ಲ, ಅಂತವ್ ಮೊಸ್‌ರನ್ನಕೆ ನಿಂಬೆರಸ ಕಲ್‌ಸಿಕಂಡ್ ತಿಂದರೆ ತುರ್‌ಸುದು ಕಮ್ಮಿಯಾದೆ.

6)ಕಾಯ್‌ಸಿ ಆರ್‌ಸಿದ ನೀರಿಗೆ ಸಕ್ಕರೆ ಮತ್ತೆ ನಿಂಬುಳಿ ರಸ ಹಾಕಿ ಕುಡ್‌ದರೆ ಸಾಮಾನ್ಯ ಜರ ಬುಟ್ಟದೆ.

7)ಬಿಸಿ ಬಿಸಿ ಟೀಗೆ ನಿಂಬುಳಿ ರಸ ಬೆರ್‌ಸಿ ಕುಡ್‌ದರೆ ಸೀತ ಹೋದೆ.

8)ಹೊತಾರೆ ಎದ್ದಂಗೆ ಬಿಸಿನೀರಿಗೆ ನಿಂಬುಳಿನ ಸೇರ್‌ಸಿ ಕುಡ್‌ದರೆ ಬೊಜ್ಜು ಕಮ್ಮಿಯಾದೆ.

9)ಮಾಸದೂಟ ಆದ ಮೇಲೆ 'ನಿಂಬುಳಿ ಟೀ' ಕುಡ್‌ದರೆ ಚರ್ಬಿ ಕರ್‌ಗಿದೆ.

10)ನಿಂಬುಳಿ ರಸನ ಯಾಗೋಳು ಕುಡಿಯೊದು 'ಮಲಬದ್ಧತೆ' ಗೆ ಮೊದ್ದು.

11)ಬ್ಯಾಕ್ಟೀರಿಯಾಂದ ಬಾವಂತ ಹೊಟ್ಟೆಬೇನೆಗೆ ನಿಂಬುಳಿ ರಾಮಬಾಣ.

12)ನಿಂಬುಳಿಲಿರ್‌ವ ಪೊಟ್ಯಾಸಿಯಂ ಮೆದುಳ್‌ಲಿರ್‌ವ ನರಕೋಸಗಳ ಬೆಳವಣಿಗೆಗೆ ಸಹಾಯ ಮಾಡ್‌ದೆ.

13)ಕಿಡ್ನಿಲಿರುವಂತ ಕಲ್ಲ್‌ನ ಕರ್‌ಗಿಸಿಕೆ ನಿಂಬುಳಿ ಬಾರೀ ಒಳ್ಳೆದ್.

14)ನಿಂಬುಳಿ ರಸಕೆ ಒಂದ್ ಹನಿ ಜೇನುತುಪ್ಪನ ಸೇರ್‌ಸಿ ಮೊಕಕೆ ಹಚ್ಚಿಬುಟ್ಟ್ ಕಾಲ್‌ಗಂಟೆ ಆದ ಮೇಲೆ ಮೊಕ ತೊಳ್‌ದರೆ ಕಪ್ಪು ಕಲೆಗ ಕಮ್ಮಿಯಾದವೆ.

15)ಸಕ್ಕರೆ ಕಾಯಿಲೆಂದ ಬಾವಂತ ಕಣ್ಣ್‌ನ ತೊಂದರೆಗೆ ನಿಂಬುಳಿ ಒಳ್ಳೆದ್.

16)ತಲೆಸುತ್ತ್ ಏನಾರೂ ಬಂದರೆ ನಿಂಬುಳಿನೇ ಮೊದ್ದು.

17)ಮೀಯಕನ ಬಿಸಿನೀರಿಗೆ ನಿಂಬುಳಿ ಎಲೆಗಳ್‌ನ ಹಾಕಿಟ್ಟ್ ಮೀದರೆ ಒಳ್ಳೆ ಗಮನ ಬಂದದೆ.

18)ದೃಷ್ಟಿ ನಿವಾಳಿಸಿಕೆ ನಿಂಬುಳಿ ಬೇಕು.

19)ನಿಂಬುಳಿದ್ ತೊಪ್ಪೆ ತೆಗ್‌ದ್ ಹಣ್ಣ್‌ನ ಚೂರ್ ಚೂರ್ ಮಾಡಿ ಗಾಯದ ಮೇಲಿಟ್ಟ್ ಪಟ್ಟಿ ಕಟ್ಟಿರೆ ಗಾಯ ವಾಸಿಯಾದೆ.

20)ವಾತ, ಪಿತ್ತ, ಕಫಕೆಲ್ಲಾ ನಿಂಬುಳಿನೇ ರಾಮಬಾಣ.

21)ಮೊಕ ಪೊರ್ಲುರ್ ಕಾಂಬಕಾದರೆ ನಿಂಬುಳಿ ರಸಕ್ಕೆ ಗ್ಲಿಸರಿನ್ ಸೇರ್‌ಸಿ ಉಜ್ಜಿಕಂಡ್ ಸ್ವಲ್ಪ ಹೊತ್ತ್ ಬುಟ್ಟು ಬಿಸಿನೀರ್‌ಲಿ ಮೊಕ ತೊಳಿಯೊಕು.

22)ಉಗುರ್‌ಗಳ್‌ಗೆ ನಿಂಬುಳಿ ರಸ ಹಚ್‌ತಾ ಬಂದರೆ ಹೊಳ್‌ಪಾದೆ.

23)ಕಪ್ಪಾದ ತುಟಿಗೆ ನಿಂಬುಳಿ ಸಿಪ್ಪೆ ಉಜ್ಜಿಕಂಡರೆ ತೊಂಡೆ ಹಣ್ಣ್‌ನಂಗಾದೆ.

24)ಹಲ್ಲ್‌ಗ ಅರ್‌ಸಿನ ಬಣ್ಣಲಿದ್ದರೆ ನಿಂಬುಳಿ ರಸ, ಉಪ್ಪುನ ಸೇರ್‌ಸಿಕಂಡ್ ದಿನಕ್ಕೆರಡ್ ಸಲ ಉಜ್ಜಿಕಂಡಿದ್ದರೆ ಹಲ್ಲ್‌ಗ ಫಳ ಫಳ ಹೊಳ್‌ದವೆ.

25)ನಿಂಬುಳಿ ಚಿಗುರ್‌ಲಿ ತಂಬುಳಿ ಮಾಡಿ ಕುಡ್‌ದರೆ ತಡಿ ತಂಪಾದೆ.

26)ಬಾಯಿ ವಾಸನೆ ಹೋಕೂತಾದರೆ ನಿಂಬುಳಿ ರಸ ಹಾಕಿದ ಬಿಸಿನೀರ್‌ಲಿ ಬಾಯ್‌ನ ಮುಕ್ಕಳ್‌ಸಿ.

27)ತಲೆಕೂದಲು ಉದ್‌ರದಿರಿಕೆ ನಿಂಬುಳಿ ರಸನ ಕೂದಲು ಬುಡಕೆ ಹಚ್ಚಿಕಣಿ.

28)ತಲೆಲಿ ಹೇನ್‌ಗ ಇದ್ದರೆ ನಿಂಬುಳಿ ರಸಕೆ ಬೆಳ್ಳುಳ್ಳಿ ಸೇರ್‌ಸಿ ಯಾಗೋಳು ತಲೆಗೆ ಉಜ್ಜಿಕಣಿ.

29)ನಿಂಬುಳಿ ರಸ ಬೆರ್‌ಸಿದ ನೀರ್‌ಲಿ ತಲೆ ತೊಳ್‌ದರೆ ಕೂದಲ್ ಹೊಳ್‌ದದೆ.

30)ಕಜ್ಜಿಗ ಇದ್ದರೆ ನಿಂಬುಳಿ ರಸ, ತುಳ್‌ಸಿ ರಸ ಮತ್ತೆ ನೀರುಳ್ಳಿ ರಸನ ಸಮ ಪ್ರಮಾಣಲಿ ಬೆರ್‌ಸಿ ಹಚ್ಚಿ.

31)ಕಾಲ್‌ನ ಹಿಮ್ಮಡಿಗ ಒಡ್‌ದಿದ್ದರೆ 2 ಚಮಚ ಗ್ಲಿಸರಿನ್ ಹನಿ ಮತ್ತೆ ನಿಂಬುಳಿ ರಸನ ಸೇರ್‌ಸಿ ಒಂದ್ 5 ನಿಮಿಸ ಉಜ್ಜಿ ಕಣಿ.

32) ಬರೀ ನಿಂಬುಳಿ ರಸ ಹಾಕಂಡಿದ್ದರೂ ಸಾಕ್ ಕಜ್ಜಿ ತುರಿಕೆ ಎಲ್ಲಾ ವಾಸಿಯಾದೆ.

33) ಹುಳ್‌ಕಡ್ಡಿಗೆ ಅರ್‌ಸಿನ ಬೇರ್‌ನ ನಿಂಬುಳಿ ರಸಲಿ ಅರ್‌ದ್ ಹಚ್ಚುದು ಮೊದ್ದು.

34) ಕುರ ಎದ್ದರೆ ಶಂಖನ ನಿಂಬುಳಿ ರಸಲಿ ತೇದ್ ಹಚ್ಚೊಕು. ಇದ್ ಕಾಲ್‌ಲಿರುವ ಆಣಿನೂ ಕರ್‌ಗಿಸಿದೆ.

35)ಕತ್ತಿ ಕಡ್‌ಕಂಡೇನಾದರೂ ಗಾಯ ಆದರೆ ವೀಳ್ಯದೆಲೆನ ನಿಂಬುಳಿ ರಸಲಿ ಸಮ್‌ದ್ ಹಚ್ಚಿ.

36)ಉಗುರ್‌ಸುತ್ತಾದರೆ ನಿಂಬುಳಿನ ತೂತ ಮಾಡಿ ಆ ಬೆರಳ್‌ನ ಅದ್‌ರೊಳಗಿಡೊಕು.

37)ಮಕ್ಕಳಿಗೆ ವಾಂತಿಯಾದರೆ ನಿಂಬುಳಿ ರಸಕೆ ಸಕ್ಕರೆ ಮತ್ತೆ ಕಾಳ್‌ಮೆಣಸ್‌ನ ಬೆರ್‌ಸಿ ಕಷಾಯ ಮಾಡಿ ಕುಡ್‌ಸೊಕು. ಸುಮಾರ್ ಒಂದು ಗಲಾಸ್ ನೀರಿಗೆ ಒಂದಿಡೀ ನಿಂಬುಳಿ, 50 ಗ್ರಾಂ ಸಕ್ಕರೆ. 5 ಕಾಳ್‌ಮೆಣಸ್ ಸಾಕಾದೆ.

ಅದ್‌ಕೆ ಜಾನಪದ ಪದ್ಯಲಿ ಹಿಂಗೆ ಹೇಳ್‌ವೆ.

"ಲಿಂಬೀಯ ಒಣಬೀಜ ಇಂಬಾಗಿ ಹುರಿದಿಟ್ಟು
ನಂಬಿ ಜೇನೊಳಗೆ ಕೊಡಬೇಕು! ಮಗನೀಗಿ
ತುಂಬಿದ ವಾಂತಿ ದೂರಾಯ್ತು ॥"

38)ಪಿತ್ತ ವಾಂತಿಯಾದವ್‌ಕೆ ನಿಂಬುಳಿನ ಎರ್‌ಡ್ ಹೋಳ್‌ಗಾಗಿ ಕತ್ತ್‌ರ್‌ಸಿ ಅದ್‌ಕೆ ಕಲ್ಲ್‌ಸಕ್ಕರೆ ತುಂಬ್‌ಸಿ ಹೊತಾರೆ ಎದ್ದಂಗೆ ಆ ರಸನ ಕೊಡೊಕು.

ಅದ್‌ಕೂ ಒಂದು ಜಾನಪದ ಪದ್ಯ ಉಟ್ಟ್.

"ಲಿಂಬಿ ಹೋಳಿನೊಳಗೆ ತುಂಬಿಟ್ಟು ಸಕ್ಕರೆಯ
ನಂಬಿ ಮುಂಜಾನೆ ರಸ ನುಂಗೀ! ಕುಳಿತರೆ
ಅಂಜಿ ಪಿತ್ತೆಲ್ಲಾ ದೂರಾಯ್ತು ॥"

ಈ ರಸನ ಕುಡ್‌ದರೆ ಪಿತ್ತ ಸನ ಹೆದ್‌ರಿ ಓಡಿ ಹೋದೆಗಡ.

39)ಗಂಟಲ್‌ಲಿ ಮೀನ್ ಮುಳ್ಳು ಸಿಕ್ಕಿಹಾಕಂಡರೆ ನಿಂಬುಳಿ ರಸನ ಹನಿಯ ಕುಡ್‌ದರೆ ಮುಳ್ಳು ಕೆಳ್‌ಗೆ ಜಾರ್‌ದೆ. ಅದ್‌ಕೇ ಕಂಡದೆ ಕೊಡ್‌ಗ್‌ಲಿ ಹಂದಿಗ್ಯೆಪಿಗೆ ಮತ್ತೆ ಮೀನಿಗೆ ನಿಂಬುಳಿ ರಸನ ಹಿಂಡುವೆ.

40)ನಿಂಬುಳಿ ಹಾಕಿದ ಬಿಸಿನೀರ್‌ಲಿ ಬಾಯ್ ಮುಕ್ಕಳ್‌ಸಿರೆ ಗಂಟ್‌ಲ್ ಬೇನೆ ದೂರಾದೆ.

41)'ಕೊರೋನಾ' ಬಂದವ್‌ರ ಮೂಗ್‌ನ ಹೊಳ್ಳೆಗಳ್‌ಗೆ ಒಂದೊಂದು ಹನಿ ನಿಂಬುಳಿ ರಸನ ಬುಡ್‌ದು ಮತ್ತೆ ರಸನ ಕುಡ್‌ಯೊದು ರಾಮಬಾಣದಂಗೆ ಕೆಲ್‌ಸ ಮಾಡ್‌ದೆಗಡ.

42)ಉಂಬುಳುಗ ಕಚ್ಚದಿರಿಕೆ, ತೋಟಕೆ ಹೋಕೆ ಮುಂದೆ ನಿಂಬುಳಿ ರಸನ ಕಾಲ್‌ಗಳ್‌ಗೆ ಉಜ್ಜಿಕೊಂಡ್ ಹೋಕು.

43)ಯಾವ್‌ದಾದರೂ ಹುಳಗ ಕಚ್ಚಿರೆ ನಿಂಬುಳಿರಸನ ಆ ಜಾಗಕೆ ಲಾಯ್ಕಲಿ ಉಜ್ಜೊಕು.

ನಿಂಬುಳಿಂದ ಇಷ್ಟೆಲ್ಲಾ ಉಪಯೋಗ ಇದ್ದರೆ, ನಿಂಬುಳಿ ತೊಪ್ಪೆ ಇನ್ನೂ ವಿಸೇಸ, ರಸಕ್ಕಿಂತ ತೊಪ್ಪೆಲೇ ಹೆಚ್ಚು ಪೋಷಕಾಂಸಗ ಒಳೊ. ಎಲ್ಲಾ ತರದ ವಿಟಮಿನ್‌ಗ, ಖನಿಜಗ, ಕರ್‌ಗದ ನಾರು, ಕ್ಯಾಲ್ಸಿಯಂ, ಪೊಟಾಸಿಯಂ, ಹೆಚ್ಚ್ 'ವಿಟಮಿನ್ ಸಿ' ನೂ ಇರ್‌ದರಿಂದಾಗಿ ಈ ತೊಪ್ಪೆನ ಬಿಸಾಡ್‌ರೆ ನಾವ್‌ಗೇ ನಷ್ಟ.

1)ಕ್ಯಾನ್ಸರ್ ರೋಗಿಗಳ್‌ಗೆ ನಿಂಬುಳಿ ತೊಪ್ಪೆ ಬಾರೀ ಒಳ್ಳೆ ಮೊದ್ದು. ಕ್ಯಾನ್ಸರ್ ಇರ್‌ವಂತ ಜೀವಕೋಸಗಳ ವಿರುದ್ಧ ಇದ್ ಹೋರಾಡ್‌ದೆ. ನಿಂಬುಳಿ ಚೋಲಿಗೆ ಸೂಕ್ಷ್ಮ ಜೀವಿಗಳ್‌ನ, ಬ್ಯಾಕ್ಟೀರಿಯಾಗಳ್‌ನ ಕೊಲ್ಲುವ ಸಕ್ತಿ ಉಟ್ಟ್.

2)ನಿಂಬುಳಿ ತೊಪ್ಪೆನ ಉಜ್ಜಿಕಂಡಿದ್ದರೆ ಚಕ್ಕಳದ ಕಲೆಗ ತಿಳಿಯಾದವೆ.

3)ಈ ತೊಪ್ಪೆಲಿ 'ವಿಟಮಿನ್ ಸಿ' ಮತ್ತೆ ಕ್ಯಾಲ್ಸಿಯಂ ಧಾರಾಳ ಉಟ್ಟ್. ಹಂಗಾಗಿ ಮೂಳೆಗಳ್‌ನ ಗಟ್ಟಿ ಮಾಡ್‌ದೆ.

4)ತಡಿಲಿ 'ವಿಟಮಿನ್ ಸಿ' ಕಮ್ಮಿಯಾದರೆ ಒಸಡ್‌ಗಳ್‌ಲಿ ರಕ್ತ ಸೋರ್‌ದೆ. ಮತ್ತೆ ಊತ ಬಂದದೆ. ನಿಂಬುಳಿ ತೊಪ್ಪೆನ ಉಪಯೋಗಿಸಿರೆ ಈ ಸಮಸ್ಯೆಗಳ್‌ಂದ ಪಾರಾಕ್.

5)ತೂಕ ಇಳ್‌ಸೊಕೂತಾದರೆ ನಿಂಬುಳಿನ ಚೋಲಿ ಸಮೇತ ಕಡ್ಡ್ ಯಾಗೋಳು ಹೊತಾರೆ ಬಿಸಿನೀರ್‌ಲಿ ಜೇನ್‌ತುಪ್ಪದೊಟ್ಟಿಗೆ ತಕಣೊಕ್.

6)ನಿಂಬುಳಿ ತೊಪ್ಪೆ ಶರ್‌ರದ ಕೊಲೆಸ್ಟ್ರಾಲ್‌ನ ಕಮ್ಮಿ ಮಾಡ್‌ದೆ. ಹೃದಯಕೆ ಸಂಬಂಧಿಸಿದ ಕಾಯಿಲೆ ಬಾರದಂಗೂ ತಡ್‌ದದೆ.

7)ನಿಂಬುಳಿ ತೊಪ್ಪೆಲಿರ್‌ವ "ಉತ್ಕರ್ಷಣ ನಿರೋಧಕ" ಮತ್ತೆ ಬೇರೆಬೇರೆ ಪೋಷಕಾಂಸಂದಾಗಿ ಚಕ್ಕಳದ ಕಲ್ಮಸಗ ದೂರಾದವೆ ಮತ್ತೆ ಕಪ್ಪುಕಲೆಗ, ಮಚ್ಚೆಗ, ಸುಕ್ಕುಗ ಕಮ್ಮಿಯಾದವೆ.

8)ಇದರ್‌ಲಿರುವ ಕರ್‌ಗದ ನಾರ್‌ನ ಅಂಸಂದಾಗಿ ಜೀರ್ಣಕ್ರಿಯೆ ಹೆಚ್ಚಾದೆ. ಕರಳ್‌ಲಿರುವ ಆಹಾರ ಲಾಯ್ಕಲಿ ಮುಂದೆ ಹೋಕೆ ಸಹಾಯ ಮಾಡ್‌ದೆ.

ಹಂಗಾಗಿ ಇಷ್ಟೆಲ್ಲಾ ಉಪಯೋಗಕೆ ಬಾವಂತ ನಿಂಬುಳಿ ಗಿಡನ ನಮ್ಮ ಹಿತ್ತಲ್‌ಲೇ ನೆಟ್ಟ್‌ಕಂಡ್ ಆರೋಗ್ಯ ಭಾಗ್ಯನ ನಮ್ಮದಾಗಿಸೊನೊ.





# ಕೋವಿಡ್ ಹತ್ತೊಂಬತ್ತರೊಟ್ಟಿಗೆ ನಮ್ಮ ಬೊದ್ಕು

" ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ
ಕುದುರೆ ನೀನ್ ಅವನು ಪೇಳ್ದಂತೆ ಪಯಣಿಗರು
ಮದುವೆಗೋ ಮಸಣಕೋ ಹೋಗೆಂದ ಕಡೆಗೋಡು
ಪದ ಕುಸಿಯೆ ನೆಲವಿಹುದು ಮಂಕುತಿಮ್ಮ" ತ ಕವಿ ಡಿ.ವಿ. ಗುಂಡಪ್ಪನವು ಅವರ ಪದ್ಯಲಿ ಹೇಳ್ಯೊಳೊ. ಈ ಪ್ರಪಂಚ ಅದೆಷ್ಟೇ ರಬಸಲಿ ಹೋದರೂ, ಆಕಾಸಂದಾಚೆ ಹಾರ್‌ರೂ, ಕಡೇಲಿ ಅದ್ ನಾವ್‌ಗ್ಯಾರಿಗೂ ಗೊತ್ತೇ ಸಾಲ್‌ದ ಒಂದ್ ಅಗೋಚರ ಸಕ್ತಿನ ಹಿಡ್‌ತಲಿ ಉಟ್ಟೂತ ಹೇಳ್‌ದನ ಸುಳ್ಳೂತ ಹೇಳಿಕೆ ಆದುಲೆ. ನಮ್ಮ ಬರಿಕಣ್ಣಿಗೆ ಕಾಂಬಕೆನೂ ಸಿಕ್ಕದ, ಇಂದ್ರಿಯಗಳ ಅನುಬವಕೂ ಬಾರದ, ಚೀನಾ ದೇಸದ ಕೆಟ್ಟ ಬಸ್‌ರ್‌ಂದ ಹೊರ್‌ಟ್ ಬಂದ ಸಣ್ಣ ಒಂದು ವೈರಾಣು ಇಡೀ ಪ್ರಪಂಚನೇ ಅಲ್ಲೋಲ ಕಲ್ಲೋಲ ಮಾಡ್ಯುಟು.

ಕ್ರೂರ ಪ್ರಾಣಿಗಳೊಟ್ಟಿಗೆ, ರಾಕ್ಷಸರೊಟ್ಟಿಗೆ, ಪ್ರಳಯದಂತ ದುರಂತಗಳೊಟ್ಟಿಗೆ, ಬಯಂಕರಾದ ಜೀವಕೆ ಕುತ್ತ್ ತರ್‌ವಂತ ನೂರಾರ್ ರೋಗ-ರುಜಿನಗಳೊಟ್ಟಿಗೆ ಹೋರಾಡಿಕಂಡೇ ಈ ಮನ್‌ಸರ್ ಬುದ್ಧಿವಂತಿಕೆಂದ ಬೊದ್‌ಕಿ ಬಂದೊಳೊ ಮತ್ತೆ ಬೊದ್‌ಕ್‌ತನೂ ಒಳೊ. ಹಂಗೆನೇ ಕೊರೋನಾತ ಹೇಳ್‌ವ ಈ ಮಹಾಮಾರಿಂದ ಸುಮ್ಮನೇ ಇದ್ದ ಈ ಪ್ರಪಂಚ, ಮೆಲ್ಲ ಯಾಗೋಳ್‌ನ ಬೊದ್‌ಕ್‌ನ ಸುರುಮಾಡ್‌ತಾ ಉಟ್ಟು. ಎಂತದೇ ಇರ್‌ಲಿ ನಾವೆಲ್ಲವೂ ಈ ಕೊರೋನಾದೊಟ್ಟಿಗೆ ಬೊದ್‌ಕುದು ಅನಿವಾರ್ಯ ಆವುಟು.

ಸಾಮಾನ್ಯಾಗಿ ಈ ತರದ ಅಂಟು ಕಾಯಿಲೆಗ, ಯುದ್ಧ ಹೊಡ್‌ದಾಟಗ, ಪ್ರಕೃತಿ

ವಿಕೋಪಗ ಪ್ರಪಂಚನ ಹತ್ತಿಪ್ಪತ್ತ್ ವರ್ಸಗಳಷ್ಟ್ ಹಿಂದಕೆ ಉಂದಿ ನಿಲ್‌ಸಿದೆ. ಆದರೆ ಈ 'ಕೊರೋನಾ'ತ ಹೇಳ್‌ವ ಸುಂಟರಗಾಳಿಲಿ ಸಿಕ್ಕಿ ದಾರಿಕಾಂಬದಂತಾಗಿರ್‌ಕನ ನಾವೆಲ್ಲವೂ ಅದ್‌ರೊಟ್ಟಿಗೆ ಎಚ್ಚರಿಕೆಂದ ಹೆಜ್ಜೆ ಇಸದೆ ಬೇರೆ ದಾರಿನೇ ಇಲ್ಲೆ.

"ಜೀವ ಇದ್ದರೆ ಜೀವನ" ತ ಹೇಳ್‌ವೆ. ಎಷ್ಟ್ ದಿನ ಹಂಗೇತ ನಾವ್ ಮನೇಲೆ ಸುಮ್ಮನೆ ಕುದ್ದ್‌ಕಣಕ್ ನೀವೇ ಹೇಳಿ. ಈ ಕೊರೋನಾಕೆ ಸರಿಯಾದ ಮಾತ್ರೆಗ ಆಗಲೀ, ಮೊದ್ದಾಗಲೀ ಬಾಕೆ ಮುಟ್ಟ ನಾವ್ ನಮ್ಮದೇ ಆದ ಜಾಗ್ರತೆಲಿ ಇರಕಾದೆ. ಮೊಕಕೆ ಸರಿಯಾದ 'ಮಾಸ್ಕ್' ನ ಹಾಕಂಡ್, ಕೈಗೆ ಸ್ಯಾನಿಟೈಸರ್ ಉಜ್ಜಿಕಂಡ್, ಸಾಮಾಜಿಕ ಅಂತರನ ಕಾಪಾಡಿಕಂಡ್ ನಾವೆಲ್ಲರೂ ಸರಕಾರದೊಟ್ಟಿಗೆ ಹಂಗೆನೇ ಕೊರೋನಕಾಗಿ ಕೆಲ್‌ಸ ಮಾಡ್‌ತಿರುವಂತ 'ಕೊರೋನಾ ಯೋಧ' ರೊಟ್ಟಿಗೆ ನಮ್ಮ ಆರೋಗ್ಯನ, ಜೀವನ ಉಳ್‌ಸಿಕಂಬಕೆ ನಾವೂ ಸನ ಕೈ ಜೋಡ್‌ಸೊಕು. ಸೋಂಕು ಬಾರದಂಗೆ ಎಚ್ಚರ ವಯ್‌ಸೊಕು.

ಬೇರೆದಕೆ ಹೋಲ್‌ಸಿರೆ 'ಕೋವಿಡ್ 19'ತ ಹೇಳ್‌ವ ಈ ವೈರಾಣು ಏನೇನೂ ಅಲ್ಲ. ಇದ್‌ರಿಂದಾಗಿ ಸತ್ತ್ ಹೋದವು ಕೂಡಾ ಬಾರೀ ಕಮ್ಮಿ. ಹಂಗಾಗಿ ನಾವು ವಿಪರೀತ ಹೆದ್‌ರಿಕಂಡ್ ಬೊದ್‌ಕುದರ್‌ಲಿ ಏನೇನೂ ಅರ್ಥ ಇಲ್ಲೆ. ಹೊರಗಿನವರೊಟ್ಟಿಗೆ ಇದ್ದ್‌ಕಂಡೇ ರೋಗ ಪ್ರತಿರೋಧಕ ಸಕ್ತಿನ ಗಳ್‌ಸಿಕಂಡ್, ಬೆಳ್‌ಸಿಕಂಡ್, ಉಳ್‌ಸಿಕಂಡ್ ನಾವ್ ಬೊದ್‌ಕೊಕು. 'ಕೋವಿಡ್ 19' ತ ಹೇಳ್‌ವ ಈ ವೈರಾಣು ಹಿಂಗೊಂದ್ ಎಲ್ಲರ್‌ನ ಹೆದ್‌ರಿಸಿ ಕೂರ್‌ಸಿದೇತ ಹೇಳ್‌ದು ಯಾವನೊಬ್ಬಂಗೂ ಗೊತ್ತಿತ್‌ಲೆ. ದೊಡ್ಡದೊಡ್ಡ ವಿಜ್ಞಾನಿಗಳ್‌ಂದ ಹಿಡ್‌ದ್ ಜ್ಯೋತಿಸಿಗಳ್‌ಗೂ ಇದ್ ಗೊತ್ತಾತ್‌ಲೆ. ಹಂಗಾಗಿ ಎಷ್ಟೆಷ್ಟೋ – ಹೆಂಗೆಂಗೋ ಮೆರಿತಿದ್ದವೆಲ್ಲಾ ಎಂತದೇ ಆದರೂ ಕಡೇಲಿ ನಾವ್ ಈ ಮಣ್ಣ್‌ನ ಮಕ್ಕಳೇತ ಹೇಳ್‌ವಂತ ಕಠಿಣ ಸತ್ಯನ ಅರ್‌ಗಿಸಿಕೊಂಡೊ.

ಕೊರೋನಾಂದಾಗಿ 'ಲಾಕ್‌ಡೌನ್' 'ಸೀಲ್‌ಡೌನ್' ಎಲ್ಲಾ ಸುರುವಾತ್. ಇದ್ ಜನ್‌ರ ಬೊದ್‌ಕ್‌ನ ಮೇಲೆ ಬಾರೀ ಪರಿಣಾಮಗಳ್‌ನ ಬೀರ್‌ತ್. ಮುಕ್ಯಾಗಿ ಜನಸಾಮಾನ್ಯಂದ ಹಿಡ್‌ದ್ ಇಡೀ ಪ್ರಪಂಚದ ದುಡ್ಡ್–ಕಾಸ್‌ನ ಪರಿಸ್ಥಿತಿ ನೆಲಕಚ್ಚಿತ್. ಪ್ರವಾಸೋದ್ಯಮಕೂ ಬಲವಾದ ಪೆಟ್ಟ್ ಬೀತ್. ಅದನೇ ನಂಬಿ ಬೊದ್‌ಕ್‌ತಿದ್ದವು ಕಂಗಾಲಾದೊ. ಕೂಲಿಯಾಳ್‌ಗಳ ಜೀವನನೇ ನರಕ ಆಗೋತ್. ಮಾಡಿಕೆ ಸರಿಯಾದ ಕೆಲ್‌ಸ ಸಿಕ್ಕದೆ ಪರ್‌ದಾಡುವಂಗಾತ್. ಪರಊರ್‌ಂದ ಬಂದ ಕೆಲ್‌ಸದವೆಲ್ಲಾ ಮೊಕ ಬಾಡ್‌ಸಿಕಂಡ್ ಅವ್‌ರವ್‌ರ ಊರ್ ಕಡೆ ಹೊರ್‌ಡಿಕೆ ಸುರು ಮಾಡ್‌ದೊ. ಹೊಟೇಲ್‌ಗ, ಪಿಚ್ಚರ್ ಟಾಕೀಸ್‌ಗ ಮುಚ್ಚಿ ಹೋಗಿ, ಅವ್‌ಗಳ ಯಜಮಾನರ್‌ಗ ದಿಕ್ಕೆಟ್ಟೊ. ಬಾಡಿಗೆಗೆ ಓಡ್‌ತಿದ್ದ ರಿಕ್ಷಗ, ಖಾಸಗಿ ಬಸ್‌ಗ ಮುಂದೆ ಹೋಕೆ ಬೊತ್ತಾಗಿ ದಾರಿ ಕಾಂಬದೆ ತೆಪ್ಪಗೆ ಕುದ್ದ್‌ಬುಟ್ಟೊ. ದಿನದ ದುಡಿಮೆನ ನಂಬಿಕಂಡಿದ್ದವೆಲ್ಲಾ ತಲೆ ಮೇಲೆ ಕೈ ಹೊತ್ತೊ. 'ಆನ್‌ಲೈನ್ ಕ್ಲಾಸ್' ಗಾತ

ಸುರುವಾಗಲಾಗಿ ಅಂತರ್ಜಾಲದ ಬಳಕೆನ ಸಾಮಾನ್ಯಾಗಿ ಎಲ್ಲವೂ ಕಲ್ತೊ. ಇಸ್ಕೂಲಿಗೆ ಹೋಗ್‌ವಂತ ಕುಸಿ, ಮಕ್ಕಳ ಶಿಸ್ತ್ ಎಲ್ಲಾ ದೂರ ಆಗೋತ್ ! ಒಟ್ರಾಸಿ ಒಬ್ಬನ ಕಂಡರೆ ಇನ್ನೊಬ್ಬ ಹೆದರ್‌ವಂಗೆ, ಸಂಸಯಲಿ ನೋಡ್‌ವಂಗೆ ಆಗೋತ್. ಬಸ್‌ನಿಲ್ಲ್‌ವ ಜಾಗಲೆಲ್ಲಾ ತರಕಾರಿ ವ್ಯಾಪಾರ ಜೋರಾತ್. ಹೊಟ್ಟೆ ಪಾಡಿಗಾಗಿ ಜನ ಕಂಡಕಂಡಲೆಲ್ಲಾ ಅಂಗಡಿಗಳ್‌ನ ಹಾಕಿಕಂಡ್ ಸಣ್ಣ ಪುಟ್ಟ ವ್ಯಾಪಾರಕ್ಕಿಳ್‌ದೊ. ಸರಕಾರಿ ಚಾಕರಿಲಿದ್ದವ್‌ಕೆ ಬುಟ್ಟರೆ ಬೇರೆ ಎಲ್ಲವ್‌ಕೂ ಕೊರೋನಾ ಬಿಸಿ ಮುಟ್ಟ್‌ಸಿತ್. ಮಾಮೂಲಿನಂಗೆ ತಿಂಬಕೆ ತಿರ್‌ಗಾಡಿಕೆ ಇಲ್ಲದೆ ಜನ ಮಂಕಾದೊ.

ಹಿಂಗೆ ಎಷ್ಟೆಷ್ಟೋ ಹೇಳಿಕಾಗದಂತ ಕಷ್ಟಗ ಬಂದರೂ, ನಾವದನ ಅನುಬವಿಸಿರೂ ಸನ ಬಹಳಷ್ಟ್ ಒಳ್ಳೆ ಪರಿಣಾಮಗಳ್‌ನ ನಾವ್ ಖಂಡಿತಾ ಕಂಡೊಳೊ. ಪೇಟೆ ಜೀವನಕೆ ನೇತಾಡಿಕಂಡ್ ಹಳ್ಳಿನ ಮರ್‌ತಿದ್ದವ್ ವಾಪಾಸ್ ಓಡಿಕಂಡ್ ಬಂದೊ. ಅವ್‌ರವ್‌ರ ಊರು-ಜನಗ ಎಷ್ಟ್ ಪೊರ್ಲೂತ ಅವ್‌ಕೆ ಗೊತ್ತಾತ್. ಬರೀ ದುಡ್ಡ್-ಕಾಸ್‌ನ ಹಿಂದೆ ಬಿದ್ದಿದ್ದವು ರಕ್ತ ಸಂಬಂದಗಳ ಬೆಲೆನ ತಿಳ್‌ಕಂಡೊ. ನಾ ಹೊರಗೆ ಹೋತ್‌ಲೆರೆ ಪ್ರಪಂಚನೇ ತಲೆಮೇಲೆ ಬಿದ್ದದೆತ ಗ್ಯಾನ ಮಾಡ್‌ಕಂಡ್ ದಿನ ಬೆಳ್‌ಗಾದರೆ ಪುರ್‌ಸೊತ್ತಿಲ್ಲದಂಗೆ ಮನೆಂದ ಹೊರಗೆ ಓಡ್‌ತಿದ್ದವು ಕಾಲ್‌ಚಾಚಿ ಮನೇಲೆ ಕುದ್ದೊ ! ಹೆಣ್ಣ್-ಮಕ್ಕ-ಹೆತ್ತವರೊಟ್ಟಿಗೆ ಕಾಲ ಕಳ್‌ದೊ. ಕಷ್ಟ-ಸುಕದ ಪಟ್ಟಾಂಗ ಹೊಡ್‌ದೊ, ಕುಸೀಲಿ ಬೇರೆಬೇರೆ ಆಟಗಳ್‌ನ ಆಡ್‌ದೊ. ಹಳೆಕಾಲದ ನೆಂಪುಗಳ್‌ನ ಅವ್ವ-ತಾತಂದ ಕೇಳಿ ತಿಳ್‌ಕಂಡೊ, ಒಳ್ಳೊಳ್ಳೆ ಪುಸ್ತಕಗಳ್‌ನ ಓದಿದೊ, ಅವ್‌ರವ್‌ರ ಹವ್ಯಾಸಗಳ್‌ನ ಪುನ ಸುರುಮಾಡಿಕಂಡೊ. ಮನೇಲಿ ಎಲ್ಲವೂ ಒಟ್ಟಿಗೆ ಕುದ್ದ್‌ಕಂಡ್ ಪಿಚ್ಚರ್‌ಗಳ್‌ನ ನೋಡ್‌ದೊ. ಅಡ್‌ಗೆಮನೆ ಕಡೆ ತಲೆ ಹಾಕದಿದ್ದ ಗಂಡ್‌ಜನ ಹೆಣ್ಣ್‌ಗಳೊಟ್ಟಿಗೆ ಮನೆಕೆಲ್‌ಸಲೂ ಸಾಯ ಮಾಡಿ ಅವರ ಮೊಕಲಿ ನಗೆ ತರ್‌ಸಿದೊ. ರುಚಿರುಚಿ ಅಡ್‌ಗೆ ತಿಂಡಿ ಮಾಡಿಕಂಡ್ ಉಂಡೊ. ಸಮಾಜಲಿ ಸಾಮಾನ್ಯಾಗಿ ನಡೀತಿದ್ದ ದೊಂಬಿ, ಗಲಾಟೆ, ತಕರಾರ್‌ಗ, ಜಾತಿ ಜಗಳಗ ಎಲ್ಲಾ ಕಮ್ಮಿಯಾತ್. ಕೆಟ್ಟ ವಿಚಾರಗಳ್‌ಗೆಲ್ಲಾ ಒಂದು ತೆರೆ ಎಳ್‌ದಂಗೆ ಕಂಡ್ ಬಾತ್. ಮಹಾತ್ಮಾ ಗಾಂಧಿ ಕಂಡ ಸಪ್ನದಂಗೆ, ಪ್ರಧಾನಿ ಮೋದಿಯವ್ ಯಾಗೋಳ್ ಹೇಳ್ತಾ ಇದ್ದಂಗೆ 'ಸ್ವಚ್ಛ ಭಾರತ' ಅದಾಗೇ ಕಾಂಬಂಗಾತ್. ಕುಡಿಯಕೆ ಕಳ್ಳ್, ಸೇದಿಕೆ ಬೀಡಿ-ಸಿಗರೇಟ್, ತಿಂಬಕೆ ಹೊಗೆಸೊಪ್ಪ್ ಸಿಕ್ಕದೆ ಸುಮಾರ್ ಮನೆಯವ್‌ಕೆಲ್ಲಾ ನೆಮ್ಮದಿಯಾತ್. ಎಲ್ಲಿ ಸಿಕ್ಕಿರೂ ಅಲ್ಲಿ ಉಗಿಯತ್ತಿದ್ದ ಜನಗೆಲ್ಲಾ ಉಗಿಯಕೆ ಹಿಂದೆ ಮುಂದೆ ನೋಡ್‌ವಂಗೆ ಆತ್. ಹೊಳೆ ಗಂಗೆನಂಗೆ ಬಾಕಿ ಇದ್ದ ಬೇರೆಲ್ಲಾ ಹೊಳೆಗ ಸನ ಕೊಚ್ಚೆ-ಕಸನೆಲ್ಲಾ ತೊಳ್‌ದ್ ಬಳ್‌ದ್ ಹಾಕಿ ಸುದ್ದ ಮಾಡಿಕಂಡೊ. ನಾವ್ ಉಸ್‌ರಾಡ್‌ವ ಗಾಳಿನೂ ಸುದ್ದ ಆಗೋತ್. ವಾಹನಗ ಅತ್ತಿತ್ತ ಹೋದು ಬಾರೀ ಕಮ್ಮಿಯಾಗಿ ಅಪಗಾತಲಿ ಸಾಯುವವರ ಸಂಖ್ಯೆ ಇಲ್ಲದೆನೇ ಹೋತ್. ಇಂಧನ ಬೇಕಷ್ಟ್ ಉಳ್‌ಕೆಯಾತ್. ಸುಕಾ ಸುಮ್ಮನೆ ಮಾಡ್‌ತಿದ್ದ ದುಂದುವೆಚ್ಚ ನಿತ್ತ್ ಹೋತ್. ಆಡಂಬರ ತೋರ್‌ಸಿಕೆ ಉಪಾಯ

ಇಲ್ಲದೆ ಹಾಂಕಾರಿಗಳ ದೌಲತ್ ಕಮ್ಮಿಯಾತ್. ಜನ್‌ರ ಶೋಕಿನೂ ಇಲ್ಲದಾತ್. ಜನ ಯೋಗ-ಧ್ಯಾನನ ರೂಡ್‌ಸಿಕಂಡ್ ಸೊಬಗರಾದೊ. ಮಾಯಾಗಿದ್ದ ಕೂಡ್-ಕುಟುಂಬದ ಪೊರ್ಲ್ ಪುನ ಕಾಂಬಕೆ ಸುರ್‌ವಾತ್. ಪಿಳ್ಳಿಕ ಚಾಂಪ ಚಾಮ್ಯವ್ವನ ಕೊಂಡಾಟಲಿ ದಿನ ಕಳ್‌ದೊ. ಹಡ್ಲ್ ಬುದ್ದ ಗದ್ದೆಗ ಹಸ್‌ರಾದೊ.

ಪಂಡ್‌ಕಾಲದ ಎಷ್ಟೋ ಆಚಾರ ವಿಚಾರಗಳ್‌ನ 'ಮೂಢನಂಬಿಕೆ 'ತ ಹೀಗಳ್‌ದ್ ಬುಟ್ಟಿದ್ದ ವಿಸ್ಯಗಳ್‌ಲಿ ನಾವ್‌ಗೆ ಸತ್ಯ ಕಾಂಬಗಾತ್. ಸುರೂಲೆಲ್ಲಾ ಹೊರ್‌ಗೆಂದ ಬಂದವ್‌ಕೆ ಚೊಂಬುಲಿ ನೀರ್ ಕೊಡ್‌ತದ್ದೊ ಮತ್ತೆ ಅವ್ ಕೈಕಾಲ್ ತೊಳ್ಕಂಡೇ ಒಳಗೆ ನುಗ್‌ತಿದ್ದೊ. ಅದ್‌ರ ಗುಟ್ಟ್ ಈಗ ನಾವ್‌ಗೆ ಗೊತ್ತಾಕೆ ಸುರ್‌ವಾತ್. ಕಾಂಬಕನ ಕೈ ಕುಲ್‌ಕದೆ ಕಾಲ್‌ಗಳ್‌ನ ಎರ್‌ಡ್ ಕೈಲಿ ಮುಟ್ಟಿ ನಮಸ್ಕಾರ ಮಾಡಿ ಆಸೀರ್ವಾದ ಪಡ್‌ಕಣ್‌ತಿದ್ದ ಕಾರಣನೂ ನಾವ್‌ಗೆ ತಿಳ್‌ತ್. ತಿಂದ್ ಎದ್ದ ಮೇಲೆ ಸೆಗಣಿ ಹಾಕಿ ಸಾರ್‌ಸ್‌ತಿದ್ದ ಗುಟ್ಟ್‌ನೂ ಗೊತ್ತಾತ್. ಆರೋಗ್ಯಭಾಗ್ಯಕಾಗಿ ಹಿರಿಯವ್ ಅನ್‌ಸರ್‌ಸ್‌ತಿದ್ದ ಎಲ್ಲಾ ಕ್ರಮಗಳ್‌ಲಿ ವೈಜ್ಞಾನಿಕ ಸತ್ಯ ಕಂಡ್ ಬಾತ್. "ಹಿತ್ತಲ ಗಿಡ ಮದ್ದಲ್ಲ" ತ ದೂರ ಇದ್ದವ್ ನಮ್ಮಲ್ಲೇ ಸಿಕ್ಕ್‌ವಂತ ಸೊಪ್ಪು-ಸದೆಗಳ್‌ಲಿ ಎಷ್ಟ್ ಮೊದ್ದುಗ ಒಳೋತ ಗೊತ್ತಾಗಿ ಆಶ್ಚರ್ಯ ಪಟ್ಟೊ. ಕಷಾಯಗಳ್‌ನ ಮಾಡಿಕಂಡ್ ಕುಡ್‌ದೊ. ಸಣ್ಣ -ಪುಟ್ಟ ಕಾಯಿಲೆ ಕಸಾಲೆಗೆಲ್ಲಾ ಅವ್ವಂದ್‌ರ ಮಾತ್‌ನ ಕೇಳಿಕೆ ಸುರು ಮಾಡ್‌ದೊ. ಪಂಡ್‌ನವ್ ಹೇಳ್‌ತಿದ್ದದೆಲ್ಲಾ ಪಥ್ಯ ಅಲ್ಲಾತ ತಿಳ್‌ಕಂಡೊ. ದೇವ್‌ರ ಮೇಲೆ ಭಕ್ತಿನ, ಎಲ್ಲನ ಸಯ್‌ಸಿಕಂಬಂತ ಸಕ್ತಿನ ಜನಗ ಬೆಳ್‌ಸಿಕಂಡೊ.

ಈ ತರಹ ಒಳ್ಳೆ ಬದಲಾವಣೆಗಳ್‌ನ ನೋಡ್‌ಕನ ನಾನ್ ಕೇಳದಂತ ಒಂದ್ ಕತೆ ಗ್ಯಾನಾತ್. ಹಿಂಗೇ ಒಬ್ಬ ಊರ್‌ಂದ ಹೊರಗೆ ಒಂದ್ ಹೊಸಮನೆ ಕಟ್ಟ್‌ಸಿತ್‌ಗಡ. ಅಲ್ಲಿ ಬೇರೆ ಯಾರ ಮನೆನೂ ಇತ್‌ಲೆಗಡ. ಹಂಗಾಗಿ ಸುತ್ತ ಮುತ್ತೆಲ್ಲಾ ಹಾವುಗ ಓಡಾಡಿಕಂಡಿರ್‌ತಿದ್ದೊ. ಜಾಲ್‌ಗೂ ಬರ್‌ತಿದ್ದೊ. ಒಮ್ಮೊಮ್ಮೆ ಬುಸ್‌ಗುಟ್ಟಿಕಂಡ್ ಮನೆಗೂ ನುಗ್ಗ್‌ತಿದ್ದೊಗಡ. ಆ ಮನೆಯವ್‌ಕೆಲ್ಲಾ ಹಾವೂತ ಹೇಳ್‌ರೆ ಬಾರೀ ಹೆದ್‌ರಿಕೆ. ಸುರು ಸುರೂಲಿ ವಿಪರೀತ ಹೆದ್‌ರಿದ ಮನೆಯವು ಪೇಟೆಂದ ಹಾವು ಹಿಡಿಯವ್‌ರ್‌ನ ಕರ್‌ಸಿ ಒಂದೊಂದು ಹಾವಿಗೂ ಐನೂರು ರೂಪಾಯಿಗಳ್‌ನ ಕೊಟ್ಟೊ. ಒಂದೆರಡ್ ವಾರ ಕಳೆಯಕನ ದುಡ್ಡ್ ಕೊಟ್ಟ್ ಅವ್‌ಕೆ ಸಾಕಾತ್. ಬಾರೀ ದುಬಾರಿಯಾತ್‌ತ ಹೇಳಿ ಅಲ್ಲೇ ಹಕ್ಕಲೆ ಹಾವ್ ಹಿಡಿಯುವವರ್‌ನ ಕರ್‌ಸಿ ಹಾವುಗಳ್‌ನ ಹಿಡ್‌ಸಿಕೆ ಸುರು ಮಾಡ್‌ದೊ. ಒಂದೊಂದು ಹಾವುನ ಹಿಡಿಯಕೆ ಅಂವ ನೂರ್ ರೂಪಾಯಿತ ಹೇಳ್ತ್. ದಿನ ಕಳ್‌ದಂಗೆ ಈ ಹಾವುಗಳ್‌ನ ಹಿಡಿಯುವ ಹಾವಾಡಿಗಂಗೆ ದುಡ್ಡ್ ಕೊಟ್ಟ್-ಕೊಟ್ಟ್ ಆಕನ ಸುಸ್ತ್ ಹೊಡ್‌ತ್. ಎಷ್ಟ್ ದಿನಾತ ಹಿಂಗೆ ನಡಿಯೊದ್ ನೀವೆ ಹೇಳಿ ! ದಿನ ಹೋದಂಗೆ ಆ ಮನೆಯವ್‌ಕೆ ಹಾವುಗಳ್‌ನ ನೋಡಿ-ನೋಡಿ ಅಬ್ಯಾಸಾತ್. ಅಂಗಳಲಿ ಓಡಾಡ್‌ತಿದ್ದ ಹಾವುಗಳಿಗೆಲ್ಲಾ ಗಿಡಕೆ ನೀರು ಬುಡ್‌ವ ಪೈಪಲೇ ನೀರ್ ಹಾರ್‌ಸಿ ಅವ್‌ಗಳ್‌ನ ಹೆದ್‌ರ್‌ಸಿ ಓಡ್‌ಸಿಕೆ ಕಲ್ತ್

ಕೊಂಡೊ. ಅವರ ಹೆದ್‌ರಿಕೆನೂ ಕಮ್ಮಿಯಾತ್. ಬೇರೆ ದಾರಿ ಇಲ್ಲದೆ ಹಾವುಗಳ್‌ನ ಕಾಂಬಕನ ಹೆದ್‌ರದೆ ಅವ್‌ಗಳೊಟ್ಟಿಗೆ ಎಚ್ಚರಿಕೆಲಿ ಬೊದ್‌ಕಿಕೆ ಕಲ್ತ್‌ಕೊಂಡೊ. ಹಂಗೆ ಮುಂದೆ ಅವ್‌ರ ಬೊದ್‌ಕ್ ಆರಾಮಲಿ ಮುಂದ್‌ವರ್‌ತ್‌ಗಡ.

ನಾವ್‌ಗೆ ಮನ್‌ಸ್‌ಲಿ ಹೆದ್‌ರಿಕೆ ಇದ್ದರೆ ಬಿದ್ದ್‌ಕಂಡಿದ್ದ ಒಂದು ಹಗ್ಗನೂ ಹಾವಾಗಿ ಕಂಡದೆ. ಧೈರ್ಯಲಿದ್ದರೆ ಅಲ್ಲಿದ್ದ ಹಾವೂ ಹಗ್ಗನಂಗಾದೆ. ಕೋವಿಡ್ ವಿಸಯನೂ ಅಷ್ಟೆ. ಈಗ ನಾವ್‌ಗೆ ಸುರೂಲಿದ್ದ ಹೆದ್‌ರಿಕೆ ಹೋವುಟು. ಈಗ ಹೆಂಗೆ ಅದ್‌ನ ಬಾರದಂಗೆ ತಡಿಯೊದ್ ಮತ್ತೆ ಹೆಂಗೆ ಪರಿಹಾರ ಹುಡ್‌ಕುದೂತ ನಾವ್ ಗ್ಯಾನ ಮಾಡಿ ಕಂಡ್‌ಕೊಂಡೊಳೊ. ಯಾಗ ಮನ್‌ಸ್‌ಗೆ ಧೈರ್ಯ ಮಾಡಿಕೊಂಡವೆನೋ ಆಗ ತಾಪತ್ರಯಕೆ ಪರಿಹಾರ ಸಿಕ್ಕಿದೆ, ದಾರಿನೂ ಕಂಡದೆ. ಪಂಡ್ ಕಾಲಂದನೂ ಹಿಂಗೆನೇ. ಎಷ್ಟೆಷ್ಟೋ ಕಷ್ಟದ ದಿನಗಳ್‌ನ ನಮ್ಮ ಹಿಂದಿನವು ಬುದ್ದಿವಂತಿಕೆಂದ, ಧೈರ್ಯಂದ ಪಾರ್‌ಮಾಡಿಕಂಡ್ ಬಂದೊಳೋತ ಇತಿಹಾಸ ಹೇಳ್‌ದೆ.

ಇಷ್ಟ್ ದಿನ ನಾವ್ ಚೀನಾಂದ ಬರುವಂತ ಕಮ್ಮಿ ಕ್ರಯಕೆ ಸಿಗ್‌ತಿದ್ದಂತ ಸಾಮಾನ್‌ಗಳ್‌ಗೆ ಜೋತು ಬಿದ್ದಿದ್ದೊ. ನಾವ್‌ಗೆ ಅವ್‌ಗಳ್‌ನ ತಯಾರಿಸುವಂತ ಸಕ್ತಿ ಸಾಮರ್ಥ್ಯ ಇದ್ದರೂ ಸನ ಸೋಂಬೇರಿತನಲಿ ನಾವ್ ಜಡ್ಡ್‌ಗಟ್ಟಿದ್ದೊ. ಈಗಾದರೂ ಹನಿಯ ಬುದ್ಧಿ ಬಂದಂಗೆ ಕಂಡದೆ ! ಸ್ವದೇಶಿ ಉತ್ಪನ್ನಗಳ್‌ನ ತಯಾರಿಸ್‌ಕಂಡ್ ಅವ್‌ರವ್‌ರ ಕಾಲ್‌ಮೇಲೆ ನಿಲ್ಲುವಂಗೆ ಕಾಣ್ತಾ ಉಟ್ಟು. ನಾವ್ ಬೆಳ್‌ದ ನಮ್ಮವೇ ಬೆಳ್‌ಸಿದ ಉತ್ಪನ್ನಗಳ್‌ನ ಬಳ್‌ಸಿಕಂಡ್ ದೇಸನ ಉದ್ಧಾರ ಮಾಡ್‌ದು ನಮ್ಮ ಕೈಲೇ ಉಟ್ಟು. ಸ್ವಾವಲಂಬಿಗಳಾಗಿ, ಸ್ವಾಭಿಮಾನಲಿ ಬೊದ್‌ಕಿಕೆ ನಾವ್ ಕಲಿಯೊಕು.

ನಮ್ಮ ಬೊದ್ಕೂತ ಹೇಳ್‌ದು ನೀರ ಮೇಲೆ ಇರ್‌ವ ಗುಳ್ಳೆನಂಗೆ. ಯಾಗ ಒಡ್‌ದ್ ಹೋದೆನೋ ಯಾರಿಗೂ ಗೊತ್ತಾಲೆ. ಕೊರೋನಾದ ಸಾವುಗಳ್‌ನ ನೋಡಿಯಾದರೂ ನಾವ್ ಪಾಠ ಕಲಿಯೊಕು. ಸತ್ತಂವ ಬಡವ ಇರ್‌ದು, ದುಡ್ಡ್‌ಗಾರನೇ ಇರ್‌ದು, ಅವಂನ ಮೊಕನ ಒಬ್ಬನೂ ನೋಡಿಕಾಗದಂತ ಪರಿಸ್ಥಿತಿ ಬಾತ್ ! ಪ್ರಕೃತಿ ಕಲ್‌ಸಿದ ಪಾಠನ ನಾವ್ ಮರಿಯದೆ ಪೊರ್ಲುಲಿ ಒರ್ಮೆಲಿ ಬೊದ್‌ಕಿಕೆ ಸುರುಮಾಡೊಕು. ಕೊರೋನಾ ಕಾಲದ ಬೆಲೆಕಟ್ಟಿಕಾಗದಂತ ಅನುಭವಗಳ ಬುತ್ತಿನ ದಾರಿದೀಪಾಗಿ ಮಾಡಿಕಂಡ್ ಒಳ್ಳೆ ದಿನಗಳ್‌ನ ಕಾಂಬಕೆ ಬಾರೀ ಎಚ್ಚರಿಕೆಲಿ ನಮ್ಮ ಹೆಜ್ಜೆಗಳ್‌ನ ಇಸೊಕು. ಆಗ ಮಾತ್ರ ನಾವೆಲ್ಲಾ ಸಾರ್ಥಕ ಬೊದ್‌ಕ್‌ನ ಕಾಂಬಕೆ ಸಾಧ್ಯ.







# ಗಾಂಧೀಜಿನ ನೆಂಪುಗ

ಮಹಾತ್ಮ ಗಾಂಧೀಜಿ ಹುಟ್ಟಿ 150 ವರ್ಸಗ ಆಗಿ ಹೋದರೂ ಅವರ ವಿಚಾರಧಾರೆಗ ಇಂದೂ ಸನ ನಾವ್ ಪಾಲ್‌ಸುವಂತದ್ದ್ ಮತ್ತೆ ಗೌರವಿಸುವಂತದ್ದ್. ಅವ್‌ರಂತ ಒಬ್ಬ ಮಹಾತ್ಮ ಒಂದ್ ಕಾಲಕಾಗಲೀ, ಒಂದ್ ದೇಸಕಾಗಲೀ ಸೀಮಿತವಾದವ್ ಖಂಡಿತಾ ಅಲ್ಲ. ಅವೊಬ್ಬ 'ವಿಶ್ವಮಾನವ' ನಾಗಿ ಬೆಳ್‌ದೊ. 'ಮೋಹನದಾಸ'ತೇಳ್ವ ಒಬ್ಬ ಹೈದನ ಮಹಾತ್ಮನಾಗಿ ಮಾಡ್‌ದ್ ಅವನತ್ರ ಇದ್ದಂತ ಸತ್ಯನ ಹುಡ್‌ಕುವ ಹಟಾತ ಹೇಳಕ್. ಅದಕೇ ಅವ್ ತನ್ನನ 'ಸತ್ಯಶೋಧಕ' ತ ಹೇಳಿಕಂಡೊ.

ಎಲ್ಲವ್ಕೂ ಅವರ ಬಗ್ಗೆ ಬೇಕಾದಷ್ಟ್ ವಿಸಯಗ ಗೊತ್ತ್‌ಟು. ಸಾಮಾನ್ಯಾಗಿ ತುಂಬಾ ಜನಕೆ ಗೊತ್ತಿಲ್ಲದೇ ಇರ್‌ವಂತ ಕೆಲವು ಸಂಗತಿಗಳ್‌ನ ನಾನಿಲ್ಲಿ ಹೇಳ್‌ನೆ. ಗಾಂಧೀಜಿಗೆ ನಡ್‌ಯೊದೂತೇಳ್ರೆ ಬಾರೀ ಕುಸಿಗಡ. ಹಂಗೆ ನಡ್‌ಕಂಡೇ ಅವು ಚಳುವಳಿಗಳ ಸಮಯಲಿ ಹೋಗ್ತಾ ಇದ್ದರೆ ಸಾಕಡ! ಸಾವಿರಾರ್ ಜನಗ ಅವ್‌ರ ಹಿಂದೆನೇ ಹೋಗ್‌ತಿದ್ದೊಗಡ. ಹಿಂಗೆ ಅವು ಒಂದಿನಲಿ 18 ಕಿ.ಮೀ. ಗಳಷ್ಟ್ ಸರಾಸರಿ ನಡ್‌ಯತಿದ್ದೊಗಡ. ಎರ್ಡ್ ದಪ ಪ್ರಪಂಚನ ಸುತ್ತಿ ಬಂದಷ್ಟ್ ಅವು ಅವ್‌ರ ಜೀವಮಾನಲಿ ನಡ್‌ದಿರ್‌ವೊತ ಹೇಳ್‌ವೆ.

ಭಾರತಕೆ ಬಾಕೆ ಮುಂದೆ ಅವು ದಕ್ಷಿಣ ಆಫ್ರಿಕಾದ ಸೇನೆನ ಸೇರಿ ದುಡಿಯತಿದ್ದೊಗಡ. ಶಾಂತಿಗಾಗಿ ಬೊದ್‌ಕಿದ ಅವು ಸೇನೆಲಿ ಚಾಕರಿಲಿದ್ದೊತ ಕೇಳಿಕೆ ಆಶ್ಚರ್ಯ ಆದರೂ ಸತ್ಯ. ಕಾಗದಗಳ್‌ನ ಬರ್‌ಯೊದರ ಮೂಲಕ ಗಾಂಧೀಜಿ ಪ್ರಪಂಚದ ದೊಡ್ಡ ಮನ್‌ಸರೊಟ್ಟಿಗೆ ಒಡನಾಟ ಇಟ್ಟ್‌ಕಂಡಿದ್ದೊಗಡ. ಅದರ್‌ಲಿ ಲಿಯೋ ಟಾಲ್ ಸ್ಟಾಯ್, ಆಲ್ಬರ್ಟ್ ಐನ್‌ಸ್ಟೀನ್ ಮತ್ತೆ ಜರ್ಮನಿಯ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರ್ ಸನ ಸೇರಿದ್ದೊಗಡ.

ಸ್ವಾತಂತ್ರ್ಯ ತಾಕೆ ಅಷ್ಟೆಲ್ಲಾ ಪೇಚಾಡ್‌ದ ಗಾಂಧೀಜಿ ನಮ್ಮ ದೇಸಕೆ ಸ್ವಾತಂತ್ರ್ಯ ಬಾಕನ ಕಲ್ಕತ್ತಾಲಿ ಒಂದ್ ಸಭೆಲಿದ್ದೊಗಡ. ಗಾಂಧೀಜಿನತ್ರ ಯಾಗೋಳು ಒಂದ್ ಹಲ್ಲ್‌ನ ಸೆಟ್ಟ್ ಇತ್ತ್‌ಗಡ. ಉಂಬಕನ ಮಾತ್ರ ಅದ್‌ನ ಅವು ಹಾಕಿಕಂಡ್ ಮತ್ತೆ ಲಾಯ್‌ಕಲಿ ತೊಳ್‌ದು ಬಟ್ಟೆಲಿ ಮಡ್‌ಚಿ ಮಡ್‌ಗ್‌ತಿದ್ದೊಗಡ.

1948 ನೇ ಇಸ್‌ವಿ ಜನವರಿ 30 ಕ್ಕೆ ನಾಥೂರಾಮ್ ಗೋಡ್ಸೆ ಗುಂಡಿಗೆ ಬಲಿಯಾದ ಮಹಾತ್ಮನ ಅಂತ್ಯಕ್ರಿಯೆನ ಡೆಲ್ಲಿನ ರಾಜಘಾಟ್‌ಲಿ ನೆರವೇರ್‌ಸಿದೊ. ಅವರ ಸಾವ್‌ನ ಸುದ್ದಿನ ಕೇಳಿ ದೇಸದ ಮೂಲೆ ಮೂಲೆಂದ ಗುಂಪ್ ಗುಂಪ್‌ಲಿ ಬಂದ್ ಸೇರ್‌ದ ಜನ್‌ರಿಂದಾಗಿ ಸುಮಾರ್ 8 ಕಿ.ಮೀ. ಗಳಷ್ಟ್ ಉದ್ದ ಜನ್‌ರ ಸಾಲ್ ಇತ್ತ್‌ಗಡ.

ಬೆಂಗಳೂರ್‌ಲಿ ಎಂ.ಜಿ ರೋಡೂತೇಳ್‌ರೆ ಯಾರಿಗೆ ಗೊತ್ತ್‌ಲೆ ಹೇಳಿ? ನಮ್ಮ ದೇಸದ ಸಣ್ಣ–ಪುಟ್ಟ ರಸ್ತೆಗಳ್‌ನ ಬುಟ್ಟರೂ ಸನ 50ಕ್ಕಿಂತ ಹೆಚ್ಚ್ ರಸ್ತೆಗಳ್‌ಗೆ ಮಹಾತ್ಮಗಾಂಧಿ ರಸ್ತೇತ ಹೆಸ್‌ರಿಟ್ಟೊಳೊ. ಅದ್‌ಬುಡಿ ಹೊರ ದೇಸಗಳ್‌ಲೂ ಸನ ಸುಮಾರು 48 ರಸ್ತೆಗ ಅವ್‌ರ ಹೆಸ್‌ರ್‌ಲೇ ಒಳೊಗಡ.

ಬೊದ್‌ಕಿಕೆ ತಿನ್ನೊಕೇ ಹೊರ್‌ತ್ ತಿಂಬಕೆ ಬೊದ್ಕಿಕಾಗದೂತ ಗಾಂಧೀಜಿ ಹೇಳ್‌ತಿದ್ದೊ. ಹೇಳ್ದನ ಮಾಡಿ ತೋರ್‌ಸ್‌ತಿದ್ದ ಗಾಂಧೀಜಿ ಎಷ್ಟ್ ಕಮ್ಮಿ ತಿಂಬಕಾದೆನೋ ಅಷ್ಟರ್‌ಲೇ ಬೊದ್ಕುತಿದ್ದೊ. ಎಷ್ಟೋ ಸತಿ ಬರೀ ಹಣ್ಣ್‌ಗಳ್‌ನ ತಿಂದ್‌ಕಂಡ್, ಮೇಕೆ ಹಾಲ್‌ನ ಕುಡ್‌ಕಂಡ್ ಕಾಲ ಕಳೀತಿದ್ದೊ. ನಾವ್ ತಿಂಬಂತ ಆಹಾರಲಿ ಕಾಲು ಭಾಗ ಮಾತ್ರ ನಾವ್ ಬೊದ್‌ಕಿಕೆ ಧಾರಾಳ ಸಾಕ್, ಇನ್ನುಳ್‌ದ ಮುಕ್ಕಾಲ್ ಭಾಗ ಡಾಕ್ಟರ್‌ಗಳ್‌ನ ಬೊದ್ಕಿಸಿಕೇತ ಹೇಳ್‌ವ ಕುಸಾಲ್ ಮಾತ್‌ನ ಒಳಗುಟ್ಟ್‌ನ ತಿಳ್‌ಕಂಡೇ ಬೊದ್ಕಿದವು ಗಾಂಧೀಜಿ.

ಪುಸ್ತಕಗಳ್‌ನ ಓದುದೂತೇಳ್ರೆ ಅವ್‌ಕೆ ಬಾರೀ ಕುಸಿ. ಕುತೂಹಲಂದ ಅನೇಕ ವಿಸಯಗಳ್‌ನ ಓದಿ ತಿಳ್‌ಕಂಡಿದ್ದೊ ಮತ್ತೆ ಅದ್ರ ಬಗ್ಗನೇ ಚರ್ಚೆ ಮಾಡ್‌ತಿದ್ದೊ. ಹಾಡ್–ಭಜನೆ ಸನ ಅವ್‌ಕೆ ಬಾರೀ ಇಷ್ಟ. ಪದ್ಯದ ರಾಗ–ತಾಳಗಳ ಬಗ್ಗೆ ಅವ್‌ಕೆ ತುಂಬಾ ಜ್ಞಾನ ಇತ್ತ್‌ಗಡ.

ಪ್ರಪಂಚಲಿ ನೀವ್ ಎಂತದರ ಬದಲಾಗೊಕೂತ ಆಸೆ ಪಟ್ಟರೆನೋ ಅದ್ ಸುರೂಲಿ ನಿಮ್ಮಲ್ಲೇ ಆಕೂತ ಹೇಳ್‌ದವು ಅವು.

ಗರೀಬರ ಕಷ್ಟಗಳ್‌ನ ಗಾಂಧೀಜಿ ಲಾಯ್‌ಕಲಿ ಅರ್ಥ ಮಾಡಿಕಂಡಿದ್ದೊ. ಅವರ ಬೇನೆಗಳ್‌ನ ನೆನ್‌ಸಿಕಂಡ್ ಸಂಕಟ ಪಡ್‌ತಿದ್ದೊ. ಅದ್‌ರ್‌ಂದಾಗಿ ಗಾಂಧೀಜಿ ಬಡವರಂಗೆ ಸರಳ ಜೀವನ ನಡ್‌ಸ್‌ತಿದ್ದೊ. ಬಡಜನ್‌ರ ಉದ್ಧಾರಕಾಗಿ ಕಷ್ಟಪಟ್ಟೊ.

ಗಾಂಧೀಜಿ ಒಮ್ಮೆ ಸಾಲೆಗೆ ಹೋದೊ. ಆಗ ಅವ್ ಒಂದ್ ತುಂಡು ಪಂಚೆನೂ, ಸಣ್ಣದೊಂದ್ ಸಾಲ್‌ನೂ ಹೆಗಲ್ ಮೇಲೆ ಹಾಕಂಡಿದ್ದೊ. ಅಲ್ಲಿದ್ದ

ಒಬ್ಬ ಹೈದ "ನೀವ್ ಯಾಕೆ ಅಂಗಿ ಹಾಕುದ್ಲೆ? " ತ ಕೇಳ್ತ್. "ನಾ ಹೊಲ್ಸಿ ಕೊಟ್ಟರೆ ಹಾಕಿರೆನಾ?"ತನೂ ಕೇಳ್ತ್. ಅದ್ಕೆ ಗಾಂಧೀಜಿ ನಗಾಡಿಕಂಡ್ "ನಾ ಒಬ್ಬನೇ ಅಲ್ಲ, ಎಲ್ಲವ್‌ಕೂ ಹೊಲ್ಸಿ ಕೊಡು" ತ ಕುಸಾಲ್ ಮಾಡ್ದೊ. "ಎಷ್ಟ್ ಅಂಗಿ ಬೇಕಾದೆ? ನಾ ಅವ್ವಂಗೆ ಹೇಳಿ ಹೊಲ್ಸಿ ಕೊಟ್ಟನೇ" ತ ಹೇಳ್ತ್ ಆ ಹೈದ. ಆಗ ಗಾಂಧೀಜಿ "ಬರೇ ಒಂದೆರ್‌ಡ್ ಸಾಕಾದುಲೆಪ್ಪಾ. 40 ಕೋಟಿಗಿಂತ ಜಾಸ್ತಿನೇ ಬೇಕಾದೇ" ತ ಹೇಳಿಕಂಡ್ ಹೈದನ ತಲೆಪೂಜಿ ಅಲ್ಲಿಂದ ಹೊರ್‌ಟೊ.

ಗಾಂಧೀಜಿ ಎಂತನ ಹೇಳ್ತಿದ್ದನೋ ಅದ್ನ ಮಾಡ್‌ದೊ. ಮಾಡ್‌ದರ ಹೇಳ್‌ದೊ. ಅವು ತಾನ್ ಮಾಡ್‌ದ ತಪ್ಪುಗಳ ಬಗ್ಗೆ ಮುಚ್ಚುಮರೆ ಮಾಡದೆ ಬರ್‌ದಿಸಿದೊ. ಒಂದ್ ಕಡೆ ಹೇಳ್‌ವೆ 'ನಾನ್ ನನ್ನ ಹೆಣ್ಣ್‌ನ ಅವಮಾನ ಮಾಡಿ ಬಾರೀ ತಪ್ಪು ಮಾಡ್ಯೊಳೆ. ಇದ್ನ ಗ್ಯಾನ ಮಾಡ್‌ರೆ ಬೇರೆಯವ್ ಬುಡಿ, ನನ್ನನೇ ನಾ ಕ್ಷಮಿಸಿಕಾಲೆ "ತ !

ಹಿಂಗೆ ಮಾಡ್‌ದ ತಪ್ಪ್‌ನ ಎಲ್ಲವ್‌ಕೂ ಗೊತ್ತಾಗುವಂಗೆ ಪಶ್ಚಾತ್ತಾಪಲಿ ಒಬ್ಬ ಹೇಳ್‌ದೆ ಅಥವಾ ಬರ್‌ದ್ ಇಸಿದೇತ ಹೇಳ್‌ರೆ ಅದ್ ಗಾಂಧೀಜಿಯಂತ ಮಹಾತ್ಮಂಗೆ ಮಾತ್ರ ಸಾಧ್ಯ.

ಗಾಂಧೀಜಿನ ಆತ್ಮಸಕ್ತಿ, ದೇಸಭಕ್ತಿ, ಗರೀಬರ ಮೇಲೆ ಕನಿಕರ ಇದೆಲ್ಲಾ ಗುಣಗಳ್‌ನ ನೋಡ್‌ಕನ ನಮ್ಮ ಹಿರಿಯ ಕವಿ ವಿ. ಸೀತಾರಾಮಯ್ಯ ಅವರ ಪದ್ಯದ ಸಾಲುಗ ನೆಂಪಾದವೆ.

"ಮಣಿಯದಿಹ ಮನವೊಂದು, ಸಾಧಿಪವ ಛಲವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಕರುಣೆಗೂ, ಮರುಕಕ್ಕೂ ಚಿರಕೆರೆದ ಎದೆಯೊಂದು"

ಈ ಪೊರ್ಲುನ ಪದ್ಯದ ಸಾಲುಗ ನಿಜಕ್ಕೂ ಈ ಮಹಾತ್ಮಂಗೇ ಹೇಳ್‌ದಂಗೆ ಕಂಡದೆ.






# ವಚನಗಳ್‌ಲಿ ದಾಂಪತ್ಯದ ಗುಟ್ಟ್

ವಚನ ಸಾಹಿತ್ಯತ ಹೇಳ್‌ದು ಕನ್ನಡ ಸಾಹಿತ್ಯದ ಮುಕ್ಯಾದ ರೂಪಗಳ್‌ಲಿ ಒಂದ್. ಹಾಡ್‌ರೆ ಹಾಡಾಗಿ ನಾವ್‌ಗೆ ಕೇಳ್‌ವಂತ, ಓದಿರೆ ಓದ್‌ಸಿಕಂಡೇ ಹೋಗುವಂತ ಒಂದ್ ಪೊರ್ಲುನ ಕಾವ್ಯ ಪ್ರಕಾರ ಇದ್. ಈಗಿನ ಹೊಸ ಹೊಸ ಪದ್ಯಗಳಂಗೆ !

ವೀರಶೈವಂಗ ಈ ವಚನ ಸಾಹಿತ್ಯನ ಬಳ್‌ಸಿಕಂಡ್ ನಮ್ಮ ಸಮಾಜಲಿ ಅನೇಕ ಸುಧಾರಣೆಗಳ್‌ನ ಮಾಡ್‌ದೊ. ಶರಣರ್ ಅವ್‌ಕೆ ಹೇಳೊಕೂತಾದದನ ತಮ್ಮ ವಚನಗಳ ಮೂಲಕ ಹೇಳ್‌ದೊ ಮತ್ತೆ ಬೇರೆಯವ್‌ಕೆ ಇದ್‌ರ ಮೂಲಕ ಒಳ್ಳೆ ದಾರಿನೂ ಸಿಕ್ಕುವಂಗೆ ಮಾಡ್‌ದೊ. ತಾವ್ ಪಡ್‌ಕಂಡ ಅನುಭವಗಳ್‌ನ ವಚನಗಳ್‌ಲಿ ಹೇಳಿ ಸಾಮಾಜಿಕ ಮತ್ತೆ ಧಾರ್ಮಿಕ ಕ್ರಾಂತಿಗ ಒಟ್ಟಿಗೇ ಆಗುವಂಗೆ ಮಾಡ್‌ದೊ.

12ನೇ ಶತಮಾನಲಿ ದೊಡ್ಡ ಸುಂಟರಗಾಳಿನಂಗೆ ಸುರುವಾದ್ದೇ “ಶರಣ ಕ್ರಾಂತಿ”. ಜಾತಿಭೇದ ಲಿಂಗಭೇದ ವರ್ಣಭೇದನೆಲ್ಲಾ ದೂರಮಾಡಿ ಲಿಂಗನ ಹಾಕಿಕಂಡ್ “ಲಿಂಗಾಯಿತ ಧರ್ಮ”ತ ಮಾಡಿಕಂಡೊ. ಆ ಸಮಯಲೇ ಬಸವಣ್ಣನವು ‘ಅನುಭವ ಮಂಟಪ’ನ ಸ್ಥಾಪಿಸಿದೊ. ಅಲ್ಲಿ ಯಾಗೋಳು ಸಾಮಾಜಿಕ ಮತ್ತೆ ಅಧ್ಯಾತ್ಮಿಕ ಚಿಂತನೆಗ ನಡೀತಾ ಇತ್ತ್. ಹೇಳೊಕೂತಾದರೆ ಇದೊಂದ್ ಅಧ್ಯಾತ್ಮಿಕ ವಿಶ್ವ ವಿದ್ಯಾಲಯದಂಗೆ ಆಗಿತ್ತ್. ಹಂಗಾಗಿ ಇದ್‌ನ 12 ನೇ ಶತಮಾನದ ‘ಪ್ರಜಾಸತ್ತಾತ್ಮಕ ಅಧ್ಯಾತ್ಮಿಕ ಸಂಸತ್ತ್ ‘ತ ಹೇಳ್‌ವೆ.

ಭಕ್ತಿ ಧರ್ಮದ ತಾಯಿ ಬೇರಾದರೆ, ಮುಕ್ತಿ ಧರ್ಮದ ಫಲಾತ ಹೇಳಕ್. ವಚನಗಳ್‌ಲಿ ಮಾನವೀಯ ಅಂತ:ಕರಣ ಇತ್ತ್. ಶಾಂತಿ –ಪ್ರೀತಿನ ಬದ್‌ಕ್‌ನ ಸಾರ

ಇತ್ತ್. ಅದ್‌ರಿಂದಾಗಿ ವಚನಗ ಎಲ್ಲಾ ಜನಾಂಗದ, ಎಲ್ಲಾ ಕಾಲದ, ಎಲ್ಲಾ ಬಾಸೆನ ಜನಕೆ ಅತ್ಯಂತ ಆತ್ಮೀಯವಾಗಿ ಹೋವುಟ್. ವಚನಗಳ್‌ನ ಹಳೇ ಕಾಲದೂತ ತಿರಸ್ಕರಿಸುವಂಗೇ ಇಲ್ಲೆ.

ಶರಣರ ವಚನ ನಮ್ಮ ಅಂತರಂಗಕ್ಕೆ ಬೊಳ್ಪು ತೋರ್‌ಸಿದೆ. ಅನುಭವ ಮಂಟಪಲಿ ಹಿಂಗೆ ಎಲ್ಲರ ಅನುಭವಗಳ ಬೊಳ್ಪು ಸೇರಿ ಹೊಸ ಸಮಾಜನೇ ನಿರ್ಮಾಣ ಆತ್. ಅವೆಲ್ಲಾ ಬರೀ ಬ್ರಹ್ಮಚಾರಿಗಳೇ ಆಗಿ ಬೊದ್‌ಕಿದವಲ್ಲ. ಸಾಮಾನ್ಯಾಗಿ ಎಲ್ಲವೂ ಸಂಸಾರಸ್ಥರಾಗಿದ್ದ್‌ಕಂಡೇ ಮೋಕ್ಷದ ದಾರಿಲಿ ಜೊತೆಜೊತೇಲಿ ನಡ್‌ದೊ.

"ಇಂದ್ರಿಯ ನಿಗ್ರಹ ಮಾಡಿದರೆ ಬಂದು ಕಾಡುವವು ದೋಷಗಳು

ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು

ಸತಿಪತಿರತಿ ಸುಖವ ಬಿಟ್ಟರೇ ಸಿರಿಯಾಳ–ಚಂಗಳೆಯರು

ಸತಿಪತಿರತಿ ಭೋಗಸಭೋಗ ವಿಳಾಸವ ಬಿಟ್ಟನೇ ಸಿಂಧು ಬಲ್ಲಾಳನು"ತ

ದಾಂಪತ್ಯ ಧರ್ಮನ ಎತ್ತಿ ಹಿಡ್‌ದವೇ ಶರಣರ್, ನೀವ್ ಮದುವೆ ಆಕಾಗದೂತ ಎಲ್ಲೂ ಅವ್ ಹೇಳ್‌ತ್‌ಲೆ. ಇಂದ್ರಿಯಗಳ ಆಸೆಗಳ್‌ನ ಹಿಡ್‌ದಿಟ್ಟ್‌ಕಂಬದು ಖಂಡಿತಾ ಒಳ್ಳೆದಲ್ಲ. ಸಂಸಾರದ ರಥಕ್ಕೆ ಗಂಡ್–ಹೆಣ್ಣ್ ಇಬ್ಬರೂ ಎರ್ಡ್ ಚಕ್ರಗಳಂಗೆ. ಎರ್‌ಡೂ ಸಮಾನಾಗಿ ಇರೊಕೂತ ಅವರ ಅಭಿಪ್ರಾಯ ಆಗಿತ್ತ್. "ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ "ತ ಹೇಳ್‌ದವು ಅವು. ಅಂದರೆ ಇಬ್ಬರೂ ಜೊತೆಲಿದ್ದ್‌ಕಂಡ್ ಮಾಡ್‌ದ ಪೂಜೆ ಮಾತ್ರ ಪರಮಾತ್ಮಂಗೆ ಒಪ್ಪಿಗೇತ ಹೇಳ್‌ತಾ ಸಮಾಜಲಿ ಲಿಂಗ ಭೇದ ಇರಿಕಾಗದೂತ ಸೂಕ್ಷ್ಮಲಿ ಹೇಳ್‌ದೊ.

ಭಾರತಕೆ ವೈದಿಕರು ಬಾಕೆ ಮುಂದೆ ಹೆಣ್ಣ್‌ಮಕ್ಕಳೇ ಮುಖ್ಯವಾದಂತ 'ಮಾತೃಪ್ರಧಾನ' ವ್ಯವಸ್ಥೆ ಇತ್ತ್. ಇವು ಒಂದೇ ಜಾಗೆಲಿ ವಾಸ ಇದ್ದೊ. ಮತ್ತೆ ಬಂದ ಅಲೆಮಾರಿ ಜನಾಂಗದವು ಗಂಡ್ ಸಂತಾನಕೆ ಪ್ರಾಮುಖ್ಯತೆ ಕೊಟ್ಟ್ 'ಪುರುಷ ಪ್ರಧಾನ' ಸಮಾಜನ ನಿರ್ಮಾಣ ಮಾಡ್‌ದೊ. ಈ ತರದ ವ್ಯವಸ್ಥೆಲಿ ಹೆಣ್ಣ್ ಜನಾಂಗಕೆ ಯಾವ್‌ದೇ ರೀತಿಯ ಅಭಿಪ್ರಾಯ ಹೇಳಿಕೆ ಸ್ವಾತಂತ್ರ್ಯ ಇತ್ತ್‌ಲೆ. ಅದ್‌ಕಾಗಿ ಢಕ್ಕೆಯ ಬೊಮ್ಮಣ್ಣ

"ಸತಿಯ ಗುಣ ಪತಿ ನೋಡಬೇಕಲ್ಲದೆ

ಪತಿಯ ಗುಣ ಸತಿ ನೋಡಬಹುದೆ ಎಂಬರು

ಸತಿಯಿಂದ ಬಂದ ಸೋಂಕು ಪತಿಗೆ ಕೇಡಲ್ಲವೇ ?

ಪತಿಯಿಂದ ಬಂದ ಸೋಂಕು ಸತಿಗೆ ಕೇಡಲ್ಲವೇ ?" ತ

ಕೇಳ್‌ದೆ. ಒಂದ್ ಕಾಯಿಲೆ ಸಂಸಾರಲಿ ಯಾರಿಗೆ ಬಂದರೂ ಸನ ಸಂಸಾರದ ಸುಕ ಹಾಳಾದೆ. ಗಂಡ್–ಹೆಣ್ಣ್ ಇಬ್ಬರೂ ತಾಳ್ಮೆ–ಸಮಾಧಾನಲಿ ಲಾಯ್‌ಕಲಿ

ಹೊಂದಿಕಂಡ್ ಬೊದ್‌ಕುದೇ ಮುಕ್ತಿಗೆ ಇರುವಂತ ದಾರೀತ ಹೇಳ್‌ದೊ. ಹಿಂಗೆ ವೈಚಾರಿಕ ದಾಂಪತ್ಯಕ್ಕೆ ವಚನಗಳ ಮೂಲಕನೇ ಒತ್ತ್ ಕೊಟ್ಟೊ. ಮನ್‌ಸ್‌ನ ಕೇಡ್‌ನ ದೂರ ಮಾಡಿಕೆ , ಕೆಟ್ಟವರ್‌ನ ಸರಿಮಾಡಿಕೆ ನೋಡ್‌ದೊ.

ವಿಪರ್ಯಾಸತೇಲ್ರೆ ಎಷ್ಟೋ ಶತಮಾನಗಳೇ ಉರುಳಿರೂ ಸನ ಎಷ್ಟೋ ಇಂತ ಅನೇಕ ಜ್ಞಾನಿಗ ಉಪದೇಶಿಸಿರೂ ಸನ ಒಂದ್ ಹೆಣ್ಣ್‌ನ ಭಾವನೆಗಳ್‌ಗೆ, ಮನ್‌ಸಿಗೆ, ಅಭಿಪ್ರಾಯಕ್ಕೆ ಬೆಲೆಕೊಡೊಕೂತ ಇನ್ನೂ ತಿಳ್‌ಕಣದ ಗಂಡ್‌ಜನಗ ಸಮಾಜಲಿ ಹೆಚ್ಚಿನ ಸಂಖ್ಯೆಲಿ ಒಳೊ.

"ವೈಚಾರಿಕ ದಾಂಪತ್ಯ"ತ ಹೇಳ್‌ದು ಗೂಡೆನೂ–ಹೈದನೂ ಮೊದುವೆಯಾದ ಮೇಲೆ ತಿಳುವಳಿಕೆಂದ, ತಾಳ್ಮೆಂದ, ಪ್ರೀತಿಂದ ಒಟ್ಟಿಗೆ ಬೊದ್‌ಕುವ ರೀತಿ. ಇದ್ ಮೋಕ್ಷಕೆ ಇರ್‌ವ ಬಾರೀ ಸುಲಬದ ದಾರಿಗಡ. ದಾಂಪತ್ಯ ಜೀವನಕೆ ಮೂರು ಪುರುಷಾರ್ಥಗ ಅಡಿಪಾಯಗಾತ ಹೇಳ್‌ವೆ. ಹಾರಂವನ ಸಮ್ಮುಖಲಿ ಮೊದುವೆಯಾದರೆ 'ಧರ್ಮೇಚ, ಅರ್ಥೇಚ, ಕಾಮೇಚ, ನಾತಿಚರಾಮಿ' ತ ಹೇಳ್‌ವೆ. ಅಂದರೆ ಪಂಡ್ ಕಾಲಂದನೂ ಧರ್ಮ, ಸಂಪತ್ತ್, ಕಾಮಲಿ ಹೆಣ್ಣ್‌ಗೆ ಸಮಪಾಲು ಇತ್ತೂತ ಗೊತ್ತಾದೆ. ಆದರೆ ಮೋಕ್ಷ ಮಾತ್ರ ಅವವ್ ಮಾಡ್‌ದ ಕರ್ಮಫಲದ ಮೂಲಕವೇ ಸಿಕ್ಕುದುಗಡ.

ಜೇಡರ ದಾಸಿಮಯ್ಯನ ಪ್ರಕಾರ ಹೊಂದಾಣಿಕೆನ ಬೊದ್‌ಕಲಿ ಮಾತ್ರ ಸಂಸಾರದ ಸುಖ ಸಿಕ್ಕಿದೆ. ಅದ್‌ರ ಪೊರ್ಲು ಕಂಡದೆ. ಅದ್‌ಕಾಗಿ ಅಂವ "ಉರಿಯಿಲ್ಲದೆ ನೀರಿಲ್ಲದೆ ಮಳಲಕ್ಕಿ ಪಾಯಸ" ಮಾಡುವಂತ ಒಂದ್ ಗೂಡೆಗಾಗಿ ಕಾದದೇತ ಹೇಳ್‌ವೆ. ಹೊಂದಿಕಂಡ್ ಹೋಗುವಂತ ಹೆಣ್ಣ್ ಸಿಕ್ಕಿರೆ ಮಾತ್ರ ಲಾಯ್‌ಕಾದ ಸಂಸಾರ ಮಾಡಿಕೆ ಸಾಧ್ಯತ ಮುಂದೆನೇ ಅವ್‌ಕೆ ಗೊತ್ತಿತ್ತ್. ಅಂಬಲಿ ಗಂಜಿ ಕುಡ್‌ದರೂ ಸನ ಮಾನಸಿಕವಾಗಿ ಮತ್ತೆ ಅಧ್ಯಾತ್ಮಿಕವಾಗಿ ಒಂದಾದ ಸಂಸಾರಲಿ ಕಷ್ಟ, ಬೇಜಾರ್, ಬಡತನ ಇರ್‌ದುಲೇತ ಹೇಳ್‌ದು ಸುಳ್ಳಲ್ಲ. ಕುಸೀಲಿ ನಗಾಡಿಕಂಡಿದ್ದರೆ ಯಾವ ಬಂಡಾಟನೂ ಬಂಡಾಟನೇ ಆದುಲೆ .

ದುಗ್ಗಳೆನ ಮೊದುವೆಯಾಗಿ ಕುಸೀಲಿ ಬೊದ್‌ಕ್‌ತಿದ್ದ ಜೇಡರ ದಾಸಿಮಯ್ಯ ಮಾನಸಿಕವಾಗಿ ಮತ್ತೆ ಅಧ್ಯಾತ್ಮಿಕವಾಗಿ ಒಟ್ಟಾಗಿದ್ದೊ. ಹೊರಗಿನ ಯಾವುದೇ ವಸ್ತುಗಳ ಆಸೆ ಅವ್‌ರ ನೆಮ್ಮದಿನ ಹಾಳ್ ಮಾಡಿತ್‌ಲೆ. ಅವರ

"ಬಂದುದನರಿದು ಬಳಸುವಳು,

ಬಂದುದ ಪರಿಣಾಮಿಸುವಳು

ಬಂಧು ಬಳಗನ ಮರೆಸುವಳು

ದುಗ್ಗಳೆಯ ತಂದು ಬದುಕಿದೆನು ಕಾಣಾ ರಾಮನಾಥ"ತೇಳ್ವ ವಚನ ಇದ್‌ನ ಸಾರಿ ಹೇಳ್‌ದೆ. ಒಂದೇ ಆಚಾರದ, ಒಂದೇ ವಿಚಾರದ ಸಂಸಾರ ಅತ್ಯಂತ ಶ್ರೇಷ್ಠ.

ಅಟ್ಟಿ

ಶಿವಶರಣೆಗ ಪಂಡ್‌ಲಿ ಸಾಮಾನ್ಯ ಬೊದ್‌ಕ್‌ನೊಟ್ಟಿಗೇ, ಮಾಮೂಲು ಸಂಸಾರನ ನಡ್‌ಸಿಕಂಡೇ ಮುಕ್ತಿನ ದಾರಿಲಿ ಸಾಗ್‌ತಿದ್ದೊ. ಮಾಡ್‌ವಂತ ಕೆಲ್ಸ ಕಾರ್ಯಗಳ್‌ಲಿ ಪರಮಾತ್ಮನ ಕಾಂಬತಿದ್ದೊ. ಕಟ್ಟಿಕಂಡವ್‌ಕೆ ಬುದ್ಧಿ ಹೇಳಿ ಸರಿದಾರಿಗೆ ತರ್‌ವಂತ ಬೌದ್ಧಿಕವಾಗಿ ಅವನ ಬೊದ್‌ಕಲಿ ಪಾಲ್ಗೊಳ್ಳುವಂತ ಅಧಿಕಾರ ಆ ಕಾಲಲಿ ಹೆಣ್ಣಿಗಿತ್ತ್. ಹಂಗಾಗಿ ಶರಣರ್ ಅವರ್‌ನ 'ವಿಚಾರ ಪತ್ನಿ' ಗಾತ ಕರೀತಿದ್ದೊ. ಒಂದ್ ಸಂಸಾರಲಿ ಹೆಣ್ಣ್ ಅಂತರಂಗ ಆದರೆ ಗಂಡ್ ಬಹಿರಂಗ. ಅವಿಬ್ಬರೂ ಒಬ್ಬಂಗೊಬ್ಬಂಗೆ ಪೂರಕ ಆಕಂಡಿದ್ದವೇ ಹೊರ್‌ತ್ ಮಾರಕ ಅಲ್ಲ. ಒಬ್ಬಂಗೊಬ್ಬ ಹಿಂಗೆ ಅವಲಂಬಿಸಿಕಂಡ್ ಬೊದ್‌ಕುದೇ "ಅನುರೂಪ ದಾಂಪತ್ಯ" ದ ಗುಟ್ಟ್.

ಇದನೇ ಅಲ್ಲಮ ಪ್ರಭು ಹಿಂಗೆ ಹೇಳ್‌ದೊ

" ಉಭಯ ದೃಷ್ಟಿ ಏಕದೃಷ್ಟಿಯಲ್ಲಿ ಕಾಂಬಂತೆ
ದಂಪತಿ ಏಕೋಭಾವವಾಗಿ ನಿಂದಲ್ಲಿ
ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತು"

ಮೊದುವೇತ ಹೇಳ್‌ದು ಬಂಧನ ಅಲ್ಲ. ಯಾವ್‌ದೇ ಆತ್ಮೋದ್ಧಾರಕೆ ಅಡ್ಡಿನೂ ಅಲ್ಲ. ಹೊರ್‌ತಾಗಿ ಇದ್ ಬಾರೀ ಅನುಕೂಲತ ಹೇಳ್‌ವ ಸತ್ಯ ಆ ಕಾಲದ ಶರಣ ದಂಪತಿಗಳ ಬೊದ್‌ಕಿಂದ ನಾವ್‌ಗೆ ಗೊತ್ತಾದೆ. ಬಸವಣ್ಣ–ನೀಲಾಂಬಿಕೆ, ಸಿರಿಯಾಳ–ಚಂಗಳೆ, ಸಿಂಧು–ಬಲ್ಲಾಳ, ಮಾರಯ್ಯ–ಮಹಾದೇವಿಯಮ್ಮ, ಆಯ್ದಕ್ಕಿ ಮಾರಯ್ಯ–ಲಕ್ಕಮ್ಮ, ಜೇಡರ ದಾಸಿಮಯ್ಯ–ದುಗ್ಗಳೆ ಇವೆಲ್ಲಾ ಪೊರ್ಲುನ ದಾಂಪತ್ಯಕೆ ಸಾಕ್ಷಿಯಾಗಿ ಕಂಡವೆ.

ಕಾಯಕ ಯೋಗಿ ಬಸವಣ್ಣನ ಹೆಣ್ಣ್ ನೀಲಾಂಬಿಕೆ ಅಥವಾ ನೀಲ ಲೋಚನೆ ಬಸವಣ್ಣನ ಅನುಭವದ ವಿವರಗಳ್‌ನೆಲ್ಲಾ ತಿಳ್‌ಕಂಡಿತ್ತ್. 'ಕಲ್ಯಾಣ' ದ ಪ್ರತಿಯೊಂದು ಒಳ–ಹೊರಗಿನ ವಿಷಯಗ ಸನ ಅವಳಿಗೆ ಗೊತ್ತಿತ್ತ್. ಬಸವಣ್ಣ ಬಂದ ಮೇಲೆ ಕಲ್ಯಾಣಲಿ ಏನೇನಾವುಟೂತ ಹೇಳ್‌ದರ ಅರಿವು ಅವಳಿಗಿತ್ತ್. ಇದನೇ ತಮ್ಮ ವಚನಗಳ್‌ಲಿ ಹೇಳಿಕಂಡಿದ್ದೊ. ಬಸವಣ್ಣನವು "ಜಂಗಮಾತ್ಮನಾಗಬೇಕು ಪರಮಾತ್ಮನೊಳಗೊಂದಾಗಬೇಕು ಎಂದರೆ ಸಮರತಿ ಸಮಕಳೆ ಸಮಸುಖವನರಿಯಲೇಬೇಕು"ತ ಹೇಳಿದ್ದೊ.

ಇದನೇ ಅವರ ವಚನಲಿ ಹಿಂಗೆ ಕೇಳ್‌ವೆ

"ಲಿಂಗವ ಪೂಜಿಸಿ ಫಲವೇನಯ್ಯ
ಸಮರತಿ, ಸಮಕಳೆ, ಸಮಸುಖವನರಿಯದನ್ನಕ್ಕ?
ಲಿಂಗವ ಪೂಜಿಸಿ ಫಲವೇನಯ್ಯ

ಕೂಡಲಸಂಗಮ ದೇವನ ಪೂಜಿಸಿ

ನದಿಯೊಳಗೆ ನದಿ ಬೆರೆಸಿದಂತಾಗದನ್ನಕ್ಕ?"

ಪರಮಾತ್ಮನೊಳಗೆ ಒಂದಾಗಿ ಬೊದ್ಕಿಕೆ, ಮುಕ್ತಿಗಾಗಿ ಸಮರತಿ, ಸಮಕಳೆ, ಸಮಸುಖನ ನಾವ್ ತಿಳ್‌ಕಂಡಿರಕಾದೇತ. ಹಿಂಗೆ ಹೇಳ್‌ರೆ ಎಂತ?

'ಸಮರತಿ' ತ ಹೇಳ್‌ರೆ ಗಂಡ್-ಹೆಣ್ಣ್ ಎರಡಾಳೂ ಒಂದಾಗಿ ಸಮಾನತಾ ಪ್ರಜ್ಞೆಲಿ ಬಾಳ್‌ದು. ಹೆಣ್ಣ್‌ನ ಸಮಾನಭಾವಲಿ ನೋಡದಂವನ ಭಗವಂತನೂ ಮೆಚ್ಚುದ್‌ಲೆಗಡ !

'ಸಮಕಳೆ' ತ ಹೇಳ್‌ರೆ ಪ್ರತಿಯೊಬ್ಬನಲ್ಲೂ ಇರ್‌ವಂತ ಕಳೆ. ಬ್ರಹ್ಮ ತೇಜಸ್ಸ್, ಕ್ಷಾತ್ರ ತೇಜಸ್ಸೂತ ಎಂತದೂ ಇಲ್ಲೆ. ಅವ್‌ರವ್‌ರೊಳಗೆ ಇರುವ ಜ್ಞಾನದ ಬೊಳ್ಪು ಕಳೆಯಾಗಿ ಮೊಕದ ಮೇಲಿದ್ದದೆನೇ ಹೊರ್‌ತು ಚಕ್ಕಳದ ಬಣ್ಣಂದ ಕಳೆ ಬಾದುಲೇತ ಅರ್ಥ.

'ಸಮಸುಖ'ತ ಹೇಳ್‌ರೆ ಗರೀಬ-ಶ್ರೀಮಂತತ ಹೇಳ್‌ವ ಭೇದ ಸಮಾಜಲಿ ಇರಿಕಾಗದ್, ನಾವ್ ಜಾಸ್ತಿ ಆಸ್ತಿ-ಪಾಸ್ತಿ, ಸೊತ್ತ್‌ನ ಮಾಡಿಸುದು, ದುಡ್ಡು ಕೂಡಿಸುದು ಮಾಡಿಕೆ ಬೊತ್ತ್. ಅದೆಲ್ಲಾ ಶಿವಂಗೆ ಸೇರ್‌ದ್. ಹಂಗಾಗಿ ಕೂಡಿಡಿಕೆ ಆಗದೂತ ಶರಣರ್ ಹೇಳ್ದೊ.

ಇದೇ ಉದ್ದೇಸಲಿ "ದಾಸೋಹ ತತ್ವ" ನ ತಂದವು ಬಸವಣ್ಣನವು. ಇದ್‌ರಿಂದಾಗಿ ನಾವ್ ದುಡ್‌ದ್ ಗಳಿಸಿದನ ಪುನ ಸಮಾಜಕೆ ಕೊಡುವಂತ ಕೆಲ್‌ಸ ನಡೀತಿತ್ತ್. ಯಾವಂಗೆ ದುಡಿಯಕಾದುಲೆನೋ ಅವಂಗೆ ಸಾಯ ಮಾಡುವಂತ ಒಳ್ಳೆತನ ಇವರ್‌ಲಿತ್ತ್.

ಇವ್ "ಶರಣ ಸತಿ ಲಿಂಗ ಪತಿ" ತ ಹೇಳ್‌ದೊ. ಪ್ರಪಂಚನೇ ಪರಮಾತ್ಮಂಗೆ ಕುಟುಂಬಾತ ನಂಬಿಕಂಡಿದ್ದೊ. ಭಗವಂತ ಒಬ್ಬನೇ ಗಂಡ, ಭಕ್ತಂಗ ಎಲ್ಲವೂ ಅವನ ಹೆಣ್ಣ್‌ಗಳೇತ ಭಾವಿಸಿದ್ದೊ. ಹಂಗಾಗಿಯೇ ಅಂದ್ ಸಾಮರಸ್ಯದ ಬೊದ್ಕು ಕಾಂಬತಿತ್ತ್. ಇಂದ್ ನಾವ್‌ಗೆ ನಮ್ಮ ಕುಟುಂಬದೊಳಗೇ ಭಿನ್ನಾಭಿಪ್ರಾಯಗ ಒಳೊ. ಇದ್ ನಮ್ಮ ಆಧುನಿಕ ಬೊದ್ಕುನ ವ್ಯವಸ್ಥೆಲಿ ಕಾಂಬಂತ ದುರ್ಗತಿತ ಹೇಳಕ್. ಒಳ್ಳೆ ಮನ್‌ಸ್, ಬೊದ್ಕುನ ಕುಸಿ ಎರಡೂ ತನ್ನಂತಾನೇ ಮಾಯವಾಗ್‌ತಾ ಉಟ್ಟ್.

ಅಂದ್‌ನ ಕಾಲಲಿ ಗಂಡನಾದಂವ ದಾರಿ ತಪ್ಪ್‌ಕನ ತಿದ್ದಿ ಸರಿದಾರಿಗೆ ತರ್‌ವಂತ ಸಂಪೂರ್ಣ ಅಧಿಕಾರನ, ಸ್ವಾತಂತ್ರ್ಯನ ಹೆಣ್ಣ್‌ಗೆ ಕೊಟ್ಟಿದ್ದೊ. ವಚನಗಾರ್ತಿಗ ಸರಿಯಾದ ಸಮಯಲಿ ಸರಿಯಾದ ಬುದ್ಧಿ ಹೇಳಿ ತಿದ್ದಿದ ಉದಾಹರಣೆಗಳ್‌ನ ನೋಡ್‌ಕನ 'ಪ್ರತಿಯೊಬ್ಬ ಯಶಸ್ವೀ ಗಂಡಸ್‌ನ ಹಿಂದೆ ಹೆಣ್ಣ್ ಇದ್ದೇ ಇದ್ದದೇತ' ಹೇಳ್‌ದು ಸಾರ್ವಕಾಲಿಕ ಸತ್ಯತ ನಾವ್‌ಗೆ ಗೊತ್ತಾದೆ.

ಗಂಡಂಗೆ ಹೆಣ್ಣ್ ವಚನ ರೂಪಲಿ ಬುದ್ಧಿ ಹೇಳಿ ಸರಿದಾರಿಗೆ ತಂದ ಉದಾರಣೆ ಆಯ್ದಕ್ಕಿ ಮಾರಯ್ಯ ಮತ್ತೆ ಆಯ್ದಕ್ಕಿ ಲಕ್ಕಮ್ಮ ಅವರ್‌ದ್. ರಾಯಚೂರು ಜಿಲ್ಲೆನ ಲಿಂಗಸೂಗೂರು ಹಕ್ಕಲೆ ಇರ್‌ವ ಅಮರೇಶ್ವರದ ಹಿಂದುಳ್‌ದ ಜಾತಿಗೆ ಸೇರ್‌ದ ಮಾರಯ್ಯ ಮತ್ತೆ ಅವನ ಹೆಣ್ಣ್ ಲಕ್ಕಮ್ಮ ಮೇಲ್‌ಜಾತಿಯವ್‌ರ ಕಾಟ ಸಯ್‌ಸಿಕಾಗದೆ ಕಲ್ಯಾಣಕೆ ಬಂದ್ ಶರಣಾದವೆ. ಶರಣರ ಸಂಪ್ರದಾಯದಂಗೆ ಅವು ಅಕ್ಕಿನ ಹೆರ್‌ಕಿ ತರ್‌ವಂತ ಕೆಲ್‌ಸ ಮಾಡುವೆ. ಅಂದರೆ ಭತ್ತ ಕುಟ್ಟುಕನ, ಅಕ್ಕಿ ಬೇಸ್‌ಕನ, ಭತ್ತ-ಅಕ್ಕಿನ ಅಳೆಯಕನ ಚೆಲ್ಲ್‌ವಂತ ಅಕ್ಕಿಕಾಳ್‌ನ ಹೆಕ್ಕಿ ತಕಂಬಾವಂತ ಕೆಲ್‌ಸ ಅವರ್‌ದಾಗಿತ್.

ಒಂದ್‌ದಿನ, ಮನೇಲಿ ಮಾರಯ್ಯ ಕುದ್ದ್‌ಕಂಡ್ ಬೇರೆ ಶರಣರೊಟ್ಟಿಗೆ 'ಕೆಲ್‌ಸದ ಮಹತ್ವ 'ದ ಕುರ್‌ತ್ ಚರ್ಚೆಲಿ ಮುಳ್‌ಗಿಹೋಗಿತ್. ಹೊತ್ತಾದೇ ಅವಂಗೆ ಗೊತ್ತಾತ್‌ಲೆ. ಗಂಡನ ಕೆಲ್‌ಸ ಹಾಳಾದೆಲಾತ ಚಿಂತೆ ಲಕ್ಕಮ್ಮಂಗೆ. ತಡಮಾಡದೆ ಹೊರಗೆ ಬಂದ್ ಸೂಕ್ಷ್ಮರೀತಿಲಿ ಅವಂಗೆ ಬ್ಯಾನೆ ಆಗದಂಗೆ, ಮರ್ಯಾದೆ ಹೋಗದಂಗೆ ಹಿಂಗೆ ಹೇಳ್‌ದೆ,

"ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ
ತಪ್ಪಲ ಅಕ್ಕಿಯ ತಂದು, ನಿಶ್ಚೈಯಿಸಿ ಮಾಡಬೇಕು ಮಾರಯ್ಯ
ಪ್ರಿಯ ಅಮರೇಶ್ವರ ಲಿಂಗಕ್ಕೆ ಬೇಗ ಹೋಗು ಮಾರಯ್ಯ
ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ವನೇ'ತ ಲಾಯ್‌ಕಲಿ

ಹೇಳಿ ಗಂಡನ ಕೆಲ್‌ಸಕೆ ಹೊರ್‌ಡಿಸಿದ ಪೋರ್ಲು ಎಲ್ಲವೂ ಮೆಚ್ಚುವಂತದ್ದ್.

ಶರಣರ್ ಹೆಣ್ಣ್‌ಗಳಿಗೆ ಬಾರೀ ಮರ್ಯಾದೆ ಕೊಡ್‌ತಿದ್ದೊ. ಯಾಗ ತಪ್ಪೂತ ಗೊತ್ತಾತೋ ಮುಲಾಜಿಲ್ಲದೆ ಅವರ ತಪ್ಪುಗಳ್‌ನ ಒಪ್ಪಿಕಂಡ್, ಕ್ಷಮೆ ಬೇಡಿಕಂಡ್ ಸರಿ ಮಾಡಿಕಣ್‌ತಿದ್ದೊ.

ಒಮ್ಮೆ ಆಯ್ದಕ್ಕಿ ಮಾರಯ್ಯ ಯಾಗೋಳ್‌ಗಿಂತ ಜಾಸ್ತಿ ಅಕ್ಕಿನ ಹೆರ್‌ಕಿಕಂಡ್ ಮನೆಗೆ ತಾತ್. ಆಗ ಹೆಣ್ಣ್ ಲಕ್ಕಮ್ಮ,

"ಒಮ್ಮನ ಮೀರಿ ಇಮ್ಮನವ ತಂದಿರಿ
ಇದು ನಿಮ್ಮ ಮನವೋ ಬಸವಣ್ಣನ ಅನುಮಾನದ ಚಿತ್ತವೋ
ಈ ಮಾತು ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನ
ಅಲ್ಲಿಯೇ ಸುರಿದು ಬನ್ನಿ ಮಾರಯ್ಯ॥ "ತ ಹೇಳಿ ಹೆಚ್ಚಿಗೆ ಹೆರ್‌ಕಂಡ್ ಬಂದ ಅಕ್ಕಿನ ಅಲ್ಲೇ ಸುರ್‌ದ್ ಬರ್‌ವಂಗೆ ಮಾಡ್‌ತ್. ಇಂತ ಹೆಣ್ಣ್‌ಗ ಇದ್ದರೆ ಭ್ರಷ್ಟಾಚಾರ ಇರ್‌ದುಲೆ.

ಅಟ್ಟಿ

"ಆಸೆಯೆಂಬುದು ಅರಸಂಗಲ್ಲದೆ

ಶಿವಭಕ್ತರಿಗುಂಟೇ ಅಯ್ಯಾ?"ತ ಕೇಳಿ ಅವನ ಕಣ್ಣ್ ತೆರ್‌ಸಿದೆ. ಈಗಿನ ಕಾಲಲಿ ಹಂಗೆ ಹೇಳ್‌ವಂತ ಹೆಣ್ಣ್‌ಜನನೂ ಇರಿಕಿಲೆ, ಬುದ್ಧಿಮಾತ್‌ನ ಕೇಳ್‌ವಂತ ಗಂಡ್‌ಜನನೂ ಇರಿಕಿಲೆ. ಸಮತೋಲನದ ಸಾಮಾಜಿಕ ಜವಾಬ್ದಾರಿನ ಬಾರಿ ಲಾಯ್‌ಕಲಿ ಶರಣರ್ ನಿಭಾಯಿಸಿದ್ ನಾವ್‌ಗೆ ಗೊತ್ತಾದೆ.

ಮನ್‌ಸಿಟ್ಟ್ ಕೆಲ್‌ಸ ಮಾಡುವವ್‌ಕೆ ಎಲ್ಲಿ ನೋಡ್‌ರೂ ಲಕ್ಷ್ಮಿ ಕಂಡದೇತ ಅಂದರೆ "ಚಿತ್ತಶುದ್ಧದಲ್ಲಿ ಕಾಯಕನ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು" ಎನ್ನುತ್ತಾ "ಕಾಯಕವೇ ಕೈಲಾಸ" ತ ಹೇಳ್‌ದೆ ಶರಣಧರ್ಮ. ಹೆಣ್ಣ್‌ಜನಗ "ನೀನ್ ನನ್ನವನಾಗಿರುವ, ಆದರೆ ನನ್ನ ವ್ಯಕ್ತಿತ್ವ ನಿನ್ನದಲ್ಲ"ತ ಹೇಳ್‌ತಾ ಪಂಡ್‌ನ ಕಾಲಲೇ ಅವ್‌ಕಿದ್ದ ಆತ್ಮಾಭಿಮಾನವ ತೋರ್‌ಸಿದೊ.

ಶರಣೆ ಅಕ್ಕಮಹಾದೇವಿ ರಾಜ ಕೌಶಿಕನ ದೂರ ಮಾಡಿ ಅವಳ ಮನ್‌ಸಲಿದ್ದ ಶಿವನ ಹುಡ್‌ಕಿಕಂಡ್ ಹೊರಟಿತ್ತ್.

" ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಾಂಗನಿಗೊಲಿದೆ

ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಾಂಗನಿಗೊಲಿದೆ

ಭವವಿಲ್ಲದ ಭಯವಿಲ್ಲದ ಚೆಲುವಾಂಗನಿಗೊಲಿದೆ" ತ ಹೇಳ್‌ತಾ ಮನ್‌ಸ್‌ಗ ಒಟ್ಟಾಗದ ಮೊದುವೆಲಿ ಸುಖ ಸಿಕ್ಕುಲೇತ ಅಂದೇ ಹೇಳಿತ್ತ್. ಮಕ್ಕಳ್‌ನ ಹೆರ್‌ದಕೆ ಮಾತ್ರ ಈ ದಾಂಪತ್ಯ ಸೀಮಿತ ಆತ್‌ಲೇತ ಹೇಳಿತ್ತ್. ಹಾಂಕಾರಂದ ವಿಶ್ವಾಸ ಆದೆ. ಕರುಣೆ ವಿಶ್ವನೇ ಕಾಪಾಡ್‌ದೇತ ಬಸವ ತತ್ವ ಹೇಳಿತ್ತ್.

ಸರ್ವಜ್ಞತ ಹೇಳ್‌ವ ವಚನಕಾರನೂ ವಚನಗಳ್‌ಲಿ ವೈಚಾರಿಕ ದಾಂಪತ್ಯಕ್ಕೆ ಬಾರೀ ಒತ್ತ್ ಕೊಟ್ಟುಟು. ಗಂಡ್–ಹೆಣ್ಣ್‌ನ ಹೊಂದಾಣಿಕೆಯ ಬೊದ್‌ಕಿಂದ ಈ ಭೂಮಿನೇ ಸ್ವರ್ಗ ಆದೇತ ಹೇಳ್ಯುಟು.

"ಬೆಚ್ಚನೆಯ ಮನೆಯಿರಲು, ವೆಚ್ಚಕ್ಕೆ ಹೊನ್ನಿರಲು

ಇಚ್ಛೆಯನರಿತು ನಡೆವ ಸತಿಯಿರಲು ಸ್ವರ್ಗಕ್ಕೆ

ಕಿಚ್ಚು ಹಚ್ಚೆಂದ ಸರ್ವಜ್ಞ "

ಹಂಗೆನೇ "ಮಾಳಿಗೆಯ ಮನೆಯಾಗಿ, ಸೂಳೆ ಹೆಂಡತಿಯಾಗಿ

ಹೋಳಿಗೆ ತುಪ್ಪ ಉಣಲಾಗಿ, ಇಂದ್ರನ

ಬಾಳಿದಕೆ ಸರಿಯೇ ಸರ್ವಜ್ಞ "

ಈ ವಚನಗ ಹೆಂಗೆ ಭೂಮಿಲೇ ಸ್ವರ್ಗನ ಸೃಷ್ಟಿ ಮಾಡ್ದೋತ ತಿಳ್‌ಸಿ ಕೊಟ್ಟವೆ.

ಅಟ್ಟಿ

ಸುಕಾ ಸುಮ್ಮನೆ ಹೆಣ್ಣ್‌ನ ಗೋಳ್ ಹೊಯ್ಕುವಂಗೆ ಸರ್ವಜ್ಞ ಹಿಂಗೆ ಎಚ್ಚರಿಕೆ ಕೊಟ್ಟದೆ,

"ಒಪ್ಪವುಳ್ಳ ಹೆಣ್ಣಲ್ಲಿ ತಪ್ಪ ಸಾಧಿಸಬೇಡ

ಕರ್ಪೂರದ ಮೇಲೆ ಕಸವಿರಲು

ಅದನೊಪ್ಪದವರುಂಟೇ ಸರ್ವಜ್ಞ"ತ ಹೇಳ್‌ತ ಸುಮ್ಮಸುಮ್ಮನೇ ಹೆಣ್ಣ್‌ನ ಹಿಯಾಳ್‌ಸ್ಬೇಡೀತ ಹೇಳ್‌ದೆ.

ಹಿಂಗೆ ಎಲ್ಲಾ ವಚನಕಾರರ್ ಹೇಳುವಂಗೆ ಮೋಕ್ಷ ಪಡೆಯೊಕಾದರೆ ಅನ್ಯೋನ್ಯತೆಲಿ ದಾಂಪತ್ಯ ಜೀವನ ನಡ್‌ಸಿಕಂಡ್, ಪರಮಾತ್ಮ ಮೆಚ್ಚುವಂಗೆ ಬೊದ್‌ಕೊಕು. ಅಂವನ ಮೇಲೆ ನಂಬಿಕೆಯಿಟ್ಟ್ ನಾವ್‌ಗೆ ದಕ್ಕಿದ ಬೊದ್ಕುಲಿ ಕುಸಿನ ಕಂಡ್‌ಕಂಡ್, ಹೊಂದಿಕಂಡ್ ಹೋದರೆ ಒಳ್ಳೆ ಸಮಾಜನ ನಿರ್ಮಿಸಿಕೆ ನಾವೂ ಕೈ ಜೋಡ್‌ಸಿದಂಗಾದೆ.





ಶ್ರೀಮತಿ ಕೊಟ್ಟಕೇರಿಯನ ಅೀಲಾ ದಯಾನಂದನವು ದಕ್ಷಿಣ ಕನ್ನಡ ಜಿಲ್ಲೆಲಿ ಸಹಾಯಕ ಕೃಷಿ ಅಧಿಕಾರಿಯಾಗಿದ್ದ ಜೇರಂಬಾಣೆಯ ಶ್ರೀ ಬೈಮನ ಆರ್ ಮಾಚಯ್ಯ ಮತ್ತೆ ಶ್ರೀಮತಿ ಪೂವಮ್ಮನವರ 2ನೇ ಮಗುಳು. ದಕ್ಷಿಣ ಕನ್ನಡ ಜಿಲ್ಲೆನ ಮುಲ್ಕಿಯ 'ವಿಜಯ ಕಾಲೇಜ್' ಅ ವಿಜ್ಞಾನ ಪದವೀಧರೆಯಾದ ಇವು ದೂರ ಸಂಪರ್ಕ ಇಲಾಖೆಲಿ ಜಾಕ್ರಿ ಪಡ್‌ಕಂಡ್ ಈಗ ಕೊಡ್‌ಗ್ ಜಿಲ್ಲೆನ **B.S.N.L** ಅ **Sub Divisional Engineer** ಆಗಿ ಕೆಲಸ ಮಾಡ್ತಾ ಒಳೊ.

ಮಡಿಕೇರಿಯ ವಕೀಲ ಕೆ.ಡಿ. ದಯಾನಂದ ಅವ್‌ರ ಹೆಣ್ಣ್ ಆಗಿರ್‌ವ ಇವುಕೆ ಕನ್ನಡ ಹಂಗೆ ಅರೆಬಾಸೆ ಬರವಣಿಗೆ ಪ್ರವೃತ್ತಿಯಾವುಟು. ಕಲೆ, ಸಾಹಿತ್ಯ, ಸಂಗೀತ ಸಂಸ್ಕೃತಿಲಿ ಆಸಕ್ತಿ ಇಟ್ಟ್‌ಕಂಡಿರ್‌ವ ಅೀಲಾನವ್‌ಕೆ ಪ್ರವಾಸ ಹೋದು, ಸಾಂಸ್ಕೃತಿಕ ಚಟುವಟಿಕೆಗಳ್‌ಅ ಕೂಡಿಯಾಡ್‌ದು ಕುಸಿ ಕೊಟ್ಟದೆ. "ಅಟ್ಟಿ" ಕೃತಿಯ ಮೂಲಕ ಸಾಹಿತ್ಯ ಲೋಕಕೆ ಕಾಲಿಡ್‌ತಿರ್‌ವ ಇವುಕೆ ಅಕಾಡೆಮಿಯ ವತಿಯಿಂದ ಶುಭಹಾರೈಕೆಗಳ್‌ನ ಸಲ್ಲಿಸುವೆ.

# ಅಟ್ಟಿ

80/-



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
"ಕಾಫಿಕೃಪಾ". ರಾಜಸೀಟ್ ರಸ್ತೆ, ಮಡಿಕೇರಿ - 571201 ಕೊಡಗು ಜಿಲ್ಲೆ.
08272-223055, ಮೊ 6362522677
arebaseacademy@gmail.com https://www.arebhasheacademy.karnataka.gov.in